# ನಮ್ಮ ಪ್ರಕಟನೆಗಳು

| | | | | |
|---|---|---|---|---|
| ಡಾ. ಹರಡೀಕರರು | ಶ್ರೀ. ರಾ. ವೆ. ಕರಗುದರಿ | ೧ | ೦ | ೦ |
| ಹುಚ್ಚಾಟಗಳು* | ಶ್ರೀ. ದ ರಾ. ಬೇಂದ್ರೆ | ೧ | ೦ | ೦ |
| ಬೆಳುದಿಂಗಳು* | ಶ್ರೀ. ಜಿ. ಪಿ. ರಾಜರತ್ನಂ | ೦ | ೮ | ೦ |
| ಪರಿವರ್ತನೆ* | ಶ್ರೀ. ಎಚ್. ರಾಮರಾವ್ | ೧ | ೦ | ೦ |
| ಅಕ್ಕ-ತಂಗಿ | ಶ್ರೀ. ನಾರಾಯಣ ಸಂಗಮ | ೩<br>೨ | ೦<br>೮ | ೦<br>೦ |
| ದೇವದಾಸ | ದಿ. ಶರಚ್ಚಂದ್ರ ಚಟರ್ಜಿ | ೧ | ೮ | ೦ |
| ಕಾಶೀನಾಥ ವೃಂದಾವನ | ,, ,, | ೨ | ೧೨ | ೦ |
| ಅಕ್ಕಾಜಿ | ,, ,, | ೧ | ೪ | |
| ಚಂದ್ರನಾಥ | ,, ,, | ೧ | ೧೦ | ೦ |
| ಅರಗಿನ ಮನೆ | ,, ,, | ೪ | ೦ | |
| ,, ಉತ್ತಮ ಪ್ರತಿ | | ೪ | ೮ | |
| ನವ ವಿಧಾನ | ,, ,, | ೦ | ೧೪ | |
| ಸತಿ ವಿರಾಜ | ,, ,, | ೨ | ೮ | |
| ಭೈರವಿ | ,, ,, | ಅಚ್ಚಿನಲ್ಲಿ | | |
| ನನ್ನ ಆರಂಭ ಜೀವನ | ಗಾಂಧೀಜಿ | ೨ | ೦ | |
| ಸ್ತ್ರೀಯರ ಸಮಸ್ಯೆಗಳು | ,, | ೧ | ೮ | |
| ಮಗಳಿಗೆ ತಂದೆಯ ಓಲೆಗಳು | ಪಂ. ನೆಹರು | ೧ | ೬ | |
| ಮರಿದುಂಬಿ | ಮಕ್ಕಳು | ೦ | ೫ | |

* ಈ ಪುಸ್ತಕಗಳಿಲ್ಲ.

ಹನ್ನೆರಡನೆ ಪ್ರಕಟನೆ:—

# ಕಾಬೂಲಿವಾಲಾ

ಮತ್ತು

ಇತರ ಕಥೆಗಳು

ದಿ. ರವೀಂದ್ರನಾಥ ಠಾಕೂರ್

ಅನುವಾದಕರು :-

ಶ್ರೀ. ಅ. ನಾರಾಯಣಸ್ವಾಮಿ ಅಯ್ಯರ್

1945

ಸಾಹಿತ್ಯ ಭಾಂಡಾರ

ಹುಬ್ಬಳ್ಳಿ

೧–೮೦ರವರೆಗೆ ವಿ. ಯ. ಜಠಾರರಿಂದ
ಧಾರವಾಡ ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್‌ನಲ್ಲಿ
ಮತ್ತು ಉಳಿದುದೆಲ್ಲ **ಕೆ. ಎನ್. ಮುರಗೋಡ**ರಿಂದ
ಹುಬ್ಬಳ್ಳಿ ಸಿಟಿ ಪ್ರೆಸ್ಸಿನಲ್ಲಿ ಮುದ್ರಿತವಾಯಿತು.

ಪ್ರಕಾಶಕರು:-
**ಮ. ಗೋವಿಂದರಾಯರು**
ಸಾಹಿತ್ಯ ಭಾಂಡಾರ
ಹುಬ್ಬಳ್ಳಿ

* ೮೭ನೇ ಪುಟದಲ್ಲಿ "ಶಶಾಂಕ" ಆರಂಭವಾಗುತ್ತದೆ. ಅದು ಬೇರೆಯಾದ ಕತೆಯೆಂದು ಭಾಸವಾಗುವಂತೆ ಅಚ್ಚಾಗಿದೆ. ಆದರೆ ಅದು ಸ್ವತಂತ್ರ ಕತೆಯಲ್ಲ. 'ಇಬ್ಬರು ಸೋದರಿಯರು' ಕತೆಯ ಭಾಗ.

# ಮೊದಲ ಮಾತು

ಕವಿವರ ರವೀಂದ್ರನಾಥ ಠಾಕೂರರು ಬರೆದಿರುವ ಸಣ್ಣ ಕತೆಗಳು ಮೂಲದಲ್ಲಿ 'ಗಲ್ಪಗುಚ್ಛ' ಎಂಬ ಹೆಸರಿನಲ್ಲಿ ಮೂರು ಭಾಗಗಳಲ್ಲಿವೆ. ಇವುಗಳಲ್ಲಿ ಎಂಬತ್ತೇಳು ಕತೆಗಳಿವೆ. ಬಹು ದಿನಗಳ ಹಿಂದೆ ಶ್ರೀಮಾನ್ ಆರ್. ವ್ಯಾಸರಾಯರೂ ಧಾರವಾಡದ ಗೆಳೆಯರ ಗುಂಪಿನವರೂ ಮೂಲದಿಂದ ಕನ್ನಡಿಸಿದ ಕೆಲವು ಕತೆಗಳು ಪುಸ್ತಕವಾಗಿಯೂ ಮಾಸ ಪತ್ರಿಕೆಗಳಲ್ಲಿಯೂ ಅಚ್ಚಾದುವು. ಈಗ ಅವು ಸಿಕ್ಕುತ್ತಿಲ್ಲ. ಈಚೆಗೆ ಅಚ್ಚಾಗಿರುವ ರವೀಂದ್ರರ ಕತೆಗಳ ಒಂದೆರಡು ಸಂಗ್ರಹಗಳು ಇಂಗ್ಲೀಷು ಅಥವಾ ಹಿಂದಿಯಿಂದ ಕನ್ನಡಕ್ಕೆ ಬಂದವು

ಹತ್ತು ವರುಷಗಳ ಹಿಂದೆ ಈ ಕತೆಗಳಲ್ಲಿ ಕೆಲವನ್ನು ಹಿಂದಿಯಿಂದ ಕನ್ನಡಿಸಿದೆನು. ಈ ಕೆಲಸಕ್ಕೆ ಕವಿವರ್ಯರ ಅಪ್ಪಣೆಬೇಡಲಾಗಿ, ಬಂಗಾಲೀ ಮೂಲದಿಂದ ಕನ್ನಡಿಸಲು ತಮ್ಮ ಅಪ್ಪಣೆಯಿದೆಯೆಂದೂ ಹಿಂದೀ ಅನುವಾದದ

ಮುಡಿಪು

ಶ್ರೀ "ಅಂಬಿಕಾತನಯ ದತ್ತ"ರಿಗೆ

**ಆದರಪೂರ್ವಕ**

ಅನುವಾದಕ್ಕೆ ತಮ್ಮ ಒಪ್ಪಿಗೆ ಇಲ್ಲವೆಂದೂ ಅವರು ತಿಳಿಸಿದರು. ಈ ವಿಷಯವಾಗಿ ಒಂದು ಮಾತನ್ನೂ ಹೇಳಿದರು— ರವೀಂದ್ರರ ಕವನವೊಂದರಲ್ಲಿ 'ಆಮಿ ಹೊಬೊ ತೊಮಾರ್ ಮಾಲಂ ಚೇರ್ ಮಾಲಾಕಾರ್' ಎಂಬ ಸಾಲು ಇದೆ — ನಾನು ನಿನ್ನ ಪೂದೋಟದ ಹೂವಾಡಿಗ (ಮಾಲೆಗಾರ) ನಾಗುವೆನು ಎಂದು ಇದರ ಅರ್ಥ. ಈ ಕವನವನ್ನು ಇಂಗ್ಲೀಷಿಗೆ ಭಾಷಾಂತರಿಸಿದವರು 'ಮಾಲೆಗಾರ' ಶಬ್ದಕ್ಕೆ "Gardner" ಎಂಬ ಶಬ್ದ ಉಪಯೋಗಿಸಿದರು. ಹಿಂದೀ ಅನುವಾದಕರು ಈ ಇಂಗ್ಲೀಷ್ ರೂಪವನ್ನು ಅನುಕರಿಸಿ "ಮಾಲೀ" ಎಂದು ಮಾಡಿದರು. ಕನ್ನಡದಲ್ಲಿ ಇದು "ತೋಂಟಿಗ" ವಾಯಿತು.

ಆಗ ನಾನು ಬಂಗಾಲಿ ಮೂಲದಿಂದ ಕನ್ನಡಿಸುವ ಸ್ಥಿತಿಯಲ್ಲಿರಲಿಲ್ಲ. ಅದು ಸಾಧ್ಯವಾದಾಗ ಹಲವು ಅಡ್ಡಿಗಳೊದಗಿದುವು. ಈಚೆಗೆ ಬೆಂಗಳೂರಿನ ಸತ್ಯಶೋಧನ ಪುಸ್ತಕಭಂಡಾರ ಮತ್ತು ಹುಬ್ಬಳ್ಳಿಯ ಸಾಹಿತ್ಯ ಭಾಂಡಾರದ ಒಡೆಯರ ನೆರವಿನಿಂದ ಅದು ಸಾಧ್ಯವಾಗುತ್ತಿದೆ ಎನ್ನಲು ಸಂತೋಷಿಸುವೆನು.

ರವೀಂದ್ರ ಸಾಹಿತ್ಯವನ್ನು ಮೂಲದಲ್ಲಿ ಆಳವಾಗಿ ಅಭ್ಯಾಸಮಾಡಿರುವ ಕನ್ನಡ ಸಾಹಿತಿಗಳು ತೀರಾ ಕಡಮೆಯೆಂದರೆ ತಪ್ಪಾಗದು. ಇರುವ ಇಂತಹ ಒಬ್ಬಿಬ್ಬರ ಸಲಹೆ ಸಹಕಾರ ಪಡೆದು ಈ ಕೆಲಸದಲ್ಲಿ ಮುಂದುವರಿಯಲು ಹಲವು ಅಡ್ಡಿ ಆತಂಕಗಳಿವೆ. ಹೀಗಾಗಿ ಈ ದಾರಿಯಲ್ಲಿ ನಾನು ಒಂಟಿಗ ನಾಗಿಯೇ ನಡೆಯಬೇಕಾಗಿದೆ. "ದಾರಿಯನ್ನೇ ದಾರಿಕೇಳು, ಇತರರನ್ನು ಕೇಳಿ ದರೆ ದಾರಿ ತಪ್ಪುವ ಸಂಭವವಿದೆ" ಎಂದು ರವೀಂದ್ರರು ಒಂದೆಡೆ ಹೇಳಿರುವರು. ಈ ಉಕ್ತಿ ಅನುಸರಿಸಿ ಈ ಕೆಲಸ ಆರಂಭಿಸಿರುವೆನು. ಇದರಲ್ಲಿ ಇರಬಹುದಾದ ದೋಷಗಳನ್ನು 'ದಾರಿ' ನಡೆಯುತ್ತ ತಿದ್ದಿಕೊಳ್ಳುವೆನು.

ಈ ಸಂಗ್ರಹದಲ್ಲಿ "ಕಾಬೂಲಿವಾಲಾ" ಮತ್ತು "ದೀದೀ" ಎಂಬ ಎರಡು ಸಣ್ಣ ಕತೆಗಳ ಮತ್ತು 'ದುಯಿ ಬೋನ್' ಎಂಬ ನೀಳ್ಗತೆಯೊಂದರ ಅನು ವಾದವಿದೆ. ಅನುವಾದದಲ್ಲಿ ಮೂಲದ ಭಾವ ಕೆಡದಂತೆ ಎಚ್ಚರಿಕೆ ವಹಿಸಿರು ವೆನು. ಒಂದು ಸಂದರ್ಭ ಮಾತ್ರ ಮಾರ್ಪಡಿಸಿರುವೆನು. ಬಂಗಾಲಿಗಳಲ್ಲಿ ಗಂಡ-ಹೆಂಡಿರು ಪರಸ್ಪರ ಸಂಭಾಷಣೆಯಲ್ಲಿ ಏಕವಚನ ಉಪಯೋಗಿಸುವರು ನಮ್ಮ ವರಿಗೆ ಇದು ವಿಚಿತ್ರವಾಗಿ ಕಂಡೀತೆಂದು ಎಣಿಸಿ ಇಂತಹ ಸಂದರ್ಭಗಳಲ್ಲಿ ಆವಶ್ಯಕವಾದೆಡೆ ಬಹುವಚನ ಉಪಯೋಗಿಸಿರುವೆನು.

ಈ ಕತೆಗಳನ್ನು ಅನುವಾದಿಸಲು ಅಪ್ಪಣೆಕೊಟ್ಟ '**ವಿಶ್ವಭಾರತಿ**' ಯವರಿಗೂ, ಕರಡು ತಿದ್ದಿ ನೆರವಾದ ಮಾನ್ಯ ಮಿತ್ರರು ಶ್ರೀಮಾನ್. ಜಿ. ವರದರಾಜ ರಾಯರಿಗೂ ನನ್ನ ವಂದನೆಗಳು.

ನಾನು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಡಲು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಪ್ರೇರಿಸಿದವರೂ, ನನ್ನ ಹಿತಚಿಂತಕರಲ್ಲೊಬ್ಬರೂ ಆದ **ಶ್ರೀ ಅಂಬಿಕಾತನಯದತ್ತರಿಗೆ ಈ ಸಣ್ಣ ಪುಸ್ತಕ ಮುಡಿಪಾಗಿದೆ.**

ಬೆಂಗಳೂರು **ಅ. ನಾರಾಯಣ ಸ್ವಾಮಿ ಅಯ್ಯರ್**

# ಕಾಬೂಲಿವಾಲಾ

ಐದು ವರ್ಷ ವಯಸ್ಸಿನ ನನ್ನ ಮಗಳು ಮಿನಿ ಒಂದು ಕ್ಷಣ ಹೊತ್ತಾದರೂ ಮಾತನಾಡದೆ ಇರತಕ್ಕವಳಲ್ಲ. ಪ್ರಪಂಚದಲ್ಲಿ ಜನ್ಮವೆತ್ತಿ ಮಾತು ಕಲಿಯಲು ಅವಳು ಒಂದೇ ಒಂದು ವರ್ಷ ಮಾತ್ರ ವ್ಯಯ ಮಾಡಿದ್ದಳು. ಆಗಿನಿಂದ ನಿದ್ರಿಸದೆ ಎಚ್ಚತ್ತಿರುವ ವೇಳೆಯಲ್ಲಿ ಒಂದು ಕ್ಷಣ ಹೊತ್ತನ್ನೂ ಮೌನದಲ್ಲಿ ಪೋಲು ಮಾಡಿದವಳಲ್ಲ. ಅವರ ತಾಯಿ ಗದರಿಸಿ ಹಲವು ಬಾರಿ ಅವಳ ಬಾಯಿ ಮುಚ್ಚಿಬಿಡುತ್ತಿದ್ದಳು. ಆ ಕೆಲಸ ನನ್ನಿಂದ ಸಾಧ್ಯವಾದುದಾಗಲಿಲ್ಲ. ಮಿನಿ ಸುಮ್ಮನಿದ್ದುದಾದರೆ ಅಸ್ವಾಭಾವಿಕವಾಗಿ ಕಾಣುತ್ತಿತ್ತು. ಅದು ನನ್ನಿಂದ ಸಹಿಸಲಾಗುತ್ತಿರಲಿಲ್ಲ. ಈ ಕಾರಣದಿಂದಲೇ ನನ್ನೊಡನೆ ಅವಳ ಹರಟೆ ಸ್ವಲ್ಪ ಉತ್ಸಾಹದೊಡನೆ ನಡೆಯುತ್ತಿತ್ತು.

ಬೆಳಗಿನ ಹೊತ್ತು, ನನ್ನ ಕಾದಂಬರಿಯ ೧೭ನೆಯ ಪರಿಚ್ಛೇದ ಬರೆಯತೊಡಗಿದ್ದೆ. ಆಗ ಮಿನಿ ಅಲ್ಲಿಗೆ ಬಂದು "ಅಪ್ಪಾ! ರಾಮ ದಯಾಲ ದರ್ವಾನನು ಕಾಗೆಗೆ 'ಕಾಕ' ಎಂದು ಹೇಳಿದ. ಅವನು ಏನೂ ತಿಳಿಯದವ ಅಲ್ಲವೇ?" ಎಂದಳು.

ಪ್ರಪಂಚದ ಭಾಷಾವಿಭಿನ್ನತೆಯ ವಿಷಯವಾಗಿ ನಾನು ಅವಳಿಗೆ ಜ್ಞಾನದಾನ ಮಾಡಲು ಆರಂಭಿಸುವಷ್ಟರಲ್ಲೇ ಅವಳು ಎರಡನೆಯ ವಿಷಯಕ್ಕೆ ಪ್ರವೇಶಿಸಿದ್ದಳು. "ಅಪ್ಪಾ! ಭೋಲಾ ಹೇಳ್ತಾನೆ. ಆಕಾಶದಲ್ಲಿ ಆನೆ ಇದೆಯಂತೆ. ಅದು ಸೊಂಡಿಲಿಂದ ನೀರೆರಚುತ್ತೆಯಂತೆ. ಅದರಿಂದಲೇ ಮಳೆ ಆಗುತ್ತೆಯಂತೆ. ಅಮ್ಮಮ್ಮ, ಭೋಲಾ ಸುಮ್ಮನೆ ಹರಟುತ್ತಲೇ ಇರ್ತಾನೆ ಅಲ್ಲವೇ? ಹಗಲೂ ರಾತ್ರಿ ಹರಟೆಯೇ! ಬರೀ ಹರಟೆ" ಎಂದಳು.

ಈ ವಿಷಯದಲ್ಲಿ ನನ್ನ ಅಭಿಪ್ರಾಯ ಅಪೇಕ್ಷಿಸದೆಯೇ ಅವಳು ಹಠಾತ್ತಾಗಿ "ಅಪ್ಪಾ! ಅಮ್ಮ ನಿನಗೇನಾಗಬೇಕು?" ಎಂದಳು.

'ತುಂಟಿ' ಎಂದು ಮನಸ್ಸಿನಲ್ಲೇ ಅಂದುಕೊಂಡು ಬಾಯಲ್ಲಿ "ಮಿನಿ! ನೀನು ಭೋಲಾನ ಜೊತೆಯಲ್ಲಿ ಆಡು ಹೋಗು ಮಗು. ನನಗೆ ಈಗ ಕೆಲಸ ವಿದೆ" ಎಂದೆ.

ಅವಳು ಆಗ ನನ್ನ ಮೇಜಿನ ಪಕ್ಕದಲ್ಲಿ ನನ್ನ ಕಾಲಬಳಿ ಕುಳಿತು ತನ್ನ ಎರಡು ಕೈ ಎರಡು ಕಾಲುಗಳಿಂದ 'ನಾದುಗೋದು' ಆಡತೊಡಗಿದ್ದಳು. ನನ್ನ ಕಾದಂಬರಿಯ ಹದಿನೇಳನೆಯ ಪರಿಚ್ಛೇದದಲ್ಲಿ ಪ್ರತಾಪಸಿಂಹನು ಕಾಂಚನಮಾಲೆಯನ್ನು ಕರೆದುಕೊಂಡು ಕತ್ತಲೆಯ ರಾತ್ರಿಯಲ್ಲಿ ಕಾರಾಗೃಹದ ಎತ್ತರವಾದ ಕಿಟಿಕೆಯಿಂದ ಕೆಳಗೆ ಹರಿಯುತ್ತಿದ್ದ ನದಿಯ ನೀರೊಳಕ್ಕೆ ಧುಮುಕುವುದರಲ್ಲಿದ್ದನು.

ನಮ್ಮ ಮನೆ ದಾರಿಯ ಮಗ್ಗುಲಲ್ಲಿತ್ತು. ಇದ್ದಕ್ಕಿದ್ದಹಾಗೆ ಮಿನಿ 'ನಾದುಗೋದು' ಆಟ ಬಿಟ್ಟು ಕಿಟಿಕೆಯ ಬಳಿಗೆ ಓಡಿದಳು. ಗಟ್ಟಿಯಾಗಿ 'ಕಾಬೂಲಿವಾಲಾ! ಓ ಕಾಬೂಲಿವಾಲಾ' ಎಂದು ಕೂಗತೊಡಗಿದಳು. ಕೊಳಕಾದ ದೊಗಳೆಯ ಉಡುಪು ತೊಟ್ಟು, ತಲೆಯಲ್ಲಿ ಪಗಡಿ ಹೆಗಲ ಮೇಲೆ ಚೀಲ ಹಾಕಿ, ಕೈಯಲ್ಲಿ ಕಾಬೂಲ್ ದ್ರಾಕ್ಷಿಯ ನಾಲ್ಕೈದು ಪೆಟ್ಟಿಗೆಗಳನ್ನು ಹಿಡಿದುಕೊಂಡು ಎತ್ತರವಾದ ಕಾಬೂಲಿನವನು ಮೆಲುನಡಗೆಯಲ್ಲಿ ದಾರಿಯಲ್ಲಿ ಹೋಗುತ್ತಿದ್ದನು. ಅವನನ್ನು ಕಂಡಾಗ ನನ್ನ ಕನ್ಯಾರತ್ನಕ್ಕೆ ಯಾವ ವಿಧದ ಭಾವೋದಯವಾಯಿತೋ ಹೇಳುವುದು ಕಷ್ಟ. ಅವನನ್ನು ಒಂದೇ ಉಸುರಿಗೆ ಕೂಗತೊಡಗಿದಳು. 'ಸರಿ ಇನ್ನು ಹೆಗಲ ಮೇಲೆ ಚೀಲ ಹೊತ್ತ ಶನಿ ಒಂದು ಬಂದು ವಕ್ರಿಸುತ್ತೆ. ನನ್ನ ಕಾದಂಬರಿಯ ಹದಿನೇಳನೆಯ ಪರಿಚ್ಛೇದ ಇನ್ನು ಮುಗಿಯುವಹಾಗಿಲ್ಲ' ಎಂದು ನಾನು ಅಂದುಕೊಂಡೆನು

ಮಿನಿಯು ಕೂಗಲು ಕಾಬೂಲಿನವನು ಹಿಂತಿರುಗಿ ನಮ್ಮ ಮನೆಯ ಕಡೆಗೆ ಬರತೊಡಗಿದನೋ ಇಲ್ಲವೋ ತಕ್ಷಣ ಅವಳು ಊರ್ಧ್ವ ಶ್ವಾಸದೊಡನೆ ಅಂತಃಪುರಕ್ಕೆ ಓಡಿದಳು. ಅವಳ ಸುಳಿವೇ ಕಾಣಲಿಲ್ಲ. ಅವಳ ಮನಸ್ಸಿನಲ್ಲಿ ಆತನ ಚೀಲವನ್ನು ಶೋಧನೆಮಾಡಿದರೆ ಅವಳಂತಹ ಎರಡು ಮೂರು ಹುಡುಗಿಯರು ಸಿಕ್ಕುವರೆಂದು ಒಂದು ಕುರುಡು ನಂಬಿಕೆಯಿತ್ತು.

ಕಾಬೂಲಿವಾಲಾ ನಗುಮುಖದೊಡನೆ ಬಂದು ನನಗೆ ಸಲಾಮು ಮಾಡಿ ನಿಂತನು. ನನ್ನ ಮನಸ್ಸಿನಲ್ಲಿ ಪ್ರತಾಪಸಿಂಗ ಮತ್ತು ಕಾಂಚನಮಾಲೆಯ ಸಂಕಟಕರ ಪರಿಸ್ಥಿತಿಯ ನೆನಪು. ಆದರೆ ಈ ಬಡಪಾಯಿಯನ್ನು

ಮನೆಗೆ ಕರೆದು ಅವನಿಂದ ಏನೂ ಕೊಂಡುಕೊಳ್ಳದಿರುವುದು ನ್ಯಾಯವಲ್ಲ ವೆಂದೆನಿಸಿತು.

ಅಷ್ಟಿಷ್ಟು ಕೊಂಡೆನು. ಆ ಮೇಲೆ ನಾನಾ ಮಾತುಕತೆಗಳು ತಲೆ ಹಾಕಿದುವು. ಅಬ್ದುಲ್‌ರಹಿಮಾನ್, ರಷ್ಯನರು, ಇಂಗ್ಲಿಷರು ಇವರುಗಳ ವಿಷಯವೂ ಸರಹದ್ದು ರಕ್ಷಣೆಯ ನೀತಿಯೂ ನಮ್ಮ ಸಂಭಾಷಣೆಯ ವಿಷಯ ಗಳಾಗಿದ್ದುವು.

ಕೊನೆಗೆ ಎದ್ದು ಹೋಗುವ ಸಮಯದಲ್ಲಿ ಅವನು 'ಬಾಬೂ! ನಿಮ್ಮ ಮಗ ಳೆಲ್ಲಿ?' ಎಂದು ಕೇಳಿದನು.

ಮಿನಿಯ ಆಧಾರವಿಲ್ಲದ ಅಂಜಿಕೆಯನ್ನು ತೊಲಗಿಸುವ ಅಭಿಪ್ರಾಯ ದಿಂದ ನಾನು ಅವಳನ್ನು ಅಂತಃಪುರದಿಂದ ಕರೆಸಿದೆನು. ಅವಳು ನನ್ನ ಮೈಗೆ ಅಂಟಿಕೊಂಡು ಕಾಬೂಲಿವಾಲಾನ ಮುಖ ಮತ್ತು ಚೀಲದಕಡೆಗೆ ಸಂದಿಗ್ಧ ದೃಷ್ಟಿ ಬೀರುತ್ತ ನಿಂತಿದ್ದಳು. ಕಾಬೂಲಿಯು ಚೀಲದಿಂದ ದ್ರಾಕ್ಷಿ ಸಕ್ಕರೆ ಬಾದಾಮಿಗಳನ್ನು ತೆಗೆದು ಅವಳಿಗೆ ಕೊಡಲೆತ್ನಿಸಿದನು. ಅವಳು ತೆಗೆದುಕೊಳ್ಳಲಿಲ್ಲ. ದ್ವಿಗುಣ ಸಂದೇಹದೊಡನೆ ನನ್ನ ಕಾಲುಗಳ ಸಂದಿ ಯಲ್ಲಿ ಅಡಗಿ ನಿಂತಳು. ಅವರಿಬ್ಬರ ಮೊದಲ ಪರಿಚಯವು ಹೀಗೆ ಆಯಿತು.

ಕೆಲವು ದಿನಗಳ ನಂತರ ಒಂದು ದಿನ ಬೆಳಿಗ್ಗೆ ಏನೋ ಕೆಲಸಕ್ಕಾಗಿ ಮನೆ ಯಿಂದ ಹೊರಕ್ಕೆ ಹೊರಟೆನು. ನನ್ನ ಮಗಳು ಬಾಗಿಲ ಹತ್ತಿರವಿದ್ದ ಬೆಂಚಿನ ಮೇಲೆ ಕುಳಿತು ತಡೆಯೇ ಇಲ್ಲದೆ ಮಾತನಾಡುತ್ತಿದ್ದುದನ್ನೂ ಕಾಬೂ ಲಿಯು ಅವಳ ಕಾಲ ಬಳಿ ಕುಳಿತು ನಗುಮುಖದೊಡನೆ ಕೇಳುತ್ತ ನಡು ನಡುವೆ ಸಂದರ್ಭವನ್ನನುಸರಿಸಿ ತನ್ನ ಅಭಿಪ್ರಾಯವನ್ನು ಹರಕು ಮುರುಕು ಬಂಗಾಳಿಯಲ್ಲಿ ಹೇಳುತ್ತಿದ್ದುದನ್ನೂ ಕಂಡೆನು. ಮಿನಿಯ ಐದು ವರ್ಷದ ಜೀವನದ ಅನುಭವದಲ್ಲಿ ಅವಳ ತಂದೆಯಲ್ಲದೆ ಇಷ್ಟು ಧೈರ್ಯಶಾಲಿ ಶ್ರೋತೃವನ್ನು ಅವಳು ಕಂಡಿರಲಿಲ್ಲ. ಅವಳ ಸಣ್ಣ ಮಡಿಲ ತುಂಬ ದ್ರಾಕ್ಷಿ, ಬಾದಾಮಿ ಇತ್ತು. "ಇವಳಿಗೆ ಇವೆಲ್ಲ ಏಕೆ ಕೊಟ್ಟೆ?" ಎಂದು ನಾನು ಕಾಬೂಲಿಯನ್ನು ಕೇಳಿದೆನು. 'ಇನ್ನು ಮೇಲೆ ಹೀಗೆ ಕೊಡಬೇಡ' ಎಂದು ಹೇಳಿ ಜೇಬಿನಿಂದ ಎಂಟಾಣೆಯ ಬಿಲ್ಲೆಯೊಂದನ್ನು ತೆಗೆದು ಅವನಿಗೆ ಕೊಟ್ಟೆನು. ಅವನು ಸಂಕೋಚವಿಲ್ಲದೆ ಆ ಅರ್ಧ ರೂಪಾಯಿಯನ್ನು ತೆಗೆದು ಕೊಂಡು ಚೀಲದಲ್ಲಿ ಹಾಕಿಕೊಂಡನು.

ಮನೆಗೆ ಹಿಂತಿರುಗಿ ಬಂದು ನೋಡಿದಾಗ ಆ ಎಂಟಾಣೆ ಹದಿನಾರಾಣೆ ಗೊಂದಲ ಎಬ್ಬಿಸಿದ್ದುದನ್ನು ಕಂಡೆನು.

ಮಿನಿಯ ತಾಯಿ ಬೆಳ್ಳಗೆ ಥಳಥಳಿಸುತ್ತ ದುಂಡಗಿದ್ದ ಪದಾರ್ಥವೊಂದನ್ನು ಕೈಯಲ್ಲಿ ಹಿಡಿದುಕೊಂಡು ಭರ್ತ್ಸನೆಯ ಧ್ವನಿಯಲ್ಲಿ "ಎಲ್ಲಿ ಸಿಕ್ಕಿತೆ ನಿನಗೆ ಈ ಎಂಟಾಣೆ" ಎಂದು ವಿಚಾರಣೆ ನಡೆಸುತ್ತಿದ್ದಳು.

"ಕಾಬೂಲಿವಾಲಾ ಕೊಟ್ಟ" ಎಂದು ಮಿನಿ ಹೇಳುತ್ತಿದ್ದಳು.

"ಕಾಬೂಲಿವಾಲಾನಿಂದ ನೀನು ಅರ್ಧ ರೂಪಾಯಿ ಇಸಕೊಳ್ಳಲು ಹೋದದ್ದೇಕೆ?"

ಮಿನಿ ಅಳತೊಡಗಿದಳು— 'ನಾನು ಕೇಳಲಿಲ್ಲ ಅವನೇ ಕೊಟ್ಟ.'

ನಾನು ಬಂದವನು ಮಿನಿಯನ್ನು ಅವಳ ಸಂಕಟದಿಂದ ಪಾರು ಮಾಡಿದೆನು.

ವಿಚಾರಿಸಲು ಕಾಬೂಲಿನವನೊಡನೆ ಇದು ಮಿನಿಯ ಎರಡನೆಯ ಭೇಟಿಯೇನೂ ಅಲ್ಲವೆಂದೂ ಇತ್ತೀಚೆಗೆ ಅವನು ಪ್ರತಿದಿನವೂ ಮಧ್ಯಾಹ್ನ ಬಂದು ಪಿಸ್ತಾ, ಬಾದಾಮಿ ಲಂಚ ಕೊಟ್ಟು ಮಿನಿಯ ಕ್ಷುದ್ರ ಹೃದಯವನ್ನು ವಶಪಡಿಸಿಕೊಂಡಿರುವನೆಂದೂ ತಿಳಿದೆನು. ಈ ಸ್ನೇಹಿತರಿಬ್ಬರ ನಡುವೆ ಹಲವು ವಾಡಿಕೆಯ ಮಾತುಕತೆ ಮತ್ತು ಹಾಸ್ಯಾಲಾಪ ನಡೆಯುತ್ತಿದ್ದುದೂ ತಿಳಿಯಿತು. ರಹಮತ್‌ನನ್ನು ಕಂಡೊಡನೆ ನನ್ನ ಮಗಳು ನಗುನಗುತ್ತ "ಕಾಬೂಲಿವಾಲಾ, ನಿನ್ನ ಚೀಲದಲ್ಲಿ ಏನಿದೆ?" ಎನ್ನುವಳು.

ರಹಮತ್ ಅನಾವಶ್ಯಕ ಅನುನಾಸಿಕಗಳನ್ನು ಉಚ್ಚರಿಸುತ್ತ "ಆನೆ" ಎನ್ನುವನು. ಅರ್ಥಾತ್ ಅವನ ಚೀಲದಲ್ಲಿ ಒಂದು 'ಆನೆ' ಇದೆ. ಇದೇ ಅವನ ಹಾಸ್ಯದ ಸಾರ — ಇದು ಅತಿ ಸೂಕ್ಷ್ಮವೆಂದು ಹೇಳುವಂತಹದಲ್ಲ. ಆದರೂ ಈ ಹಾಸ್ಯದಿಂದ ಇಬ್ಬರೂ ಆನಂದಿಸುತ್ತಿದ್ದರು. ಶರತ್ಕಾಲದ ಬೆಳಗಿನ ವೇಳೆಯಲ್ಲಿ ಒಬ್ಬ ವಯಸ್ಕನೂ ಒಂದು ಎಳೆಯ ವಯಸ್ಸಿನ ಮಗುವೂ ಸರಳ ಹಾಸ್ಯದಲ್ಲಿ [illegible]ತಿರುವುದನ್ನು ಕಂಡು ನನಗೂ ಆನಂದವಾಗುತ್ತಿತ್ತು.

ಅವರಿಬ್ಬರಲ್ಲಿ ಇನ್ನೊಂದು ವಿಷಯ ಚರ್ಚೆಯಾಗುತ್ತಿತ್ತು. ರಹಮತ್‌ನು ಮಿನಿಯೊಡನೆ "ಮಗೂ! ನೀನು ಮಾವನ ಮನೆಗೆ ಹೋಗುವುದಿಲ್ಲವೇ" ಎಂದು ಕೇಳುವನು.

ಬಂಗಾಲಿಗಳ ಮನೆಯ ಹುಡಿಗಿಯರು ಹುಟ್ಟಿದಾಗಲಿಂದ 'ಮಾವನ ಮನೆ' ಎಂಬ ಶಬ್ದದೊಡನೆ ಪರಿಚಿತರು. ಆದರೆ ನಾವು ಸ್ವಲ್ಪ ಈಗಿನ ಕಾಲದ ಸಂಪ್ರದಾಯದವರಾದುದರಿಂದ ಈ ಸಣ್ಣ ಹುಡುಗಿಗೆ ಮಾವನ ಮನೆಯ ವಿಷಯವಾಗಿ ತಿಳಿವಳಿಕೆ ಕೊಟ್ಟಿರಲಿಲ್ಲ ಆದರೂ ಮಾತಿಗೆ ಒದಲು ಮಾತು ಹೇಳದೆ ಇರುವುದು ಸಂಪೂರ್ಣವಾಗಿ ಅವಳ ಸ್ವಭಾವಕ್ಕೆ ವಿರುದ್ಧ. ಅವಳು ಹಿಂತಿರುಗಿಕೊಂಡು "ನೀನು ಮಾವನ ಮನೆಗೆ ಹೋಗುತ್ತಿಯೋ?" ಎಂದು ಕೇಳುವಳು.

ರಹಮತನು ಈ ಮಾತು ಕೇಳಿದಾಗ ಕಾಲ್ಪನಿಕ ಮಾವನನ್ನು ಉದ್ದೇಶಿಸಿ ದೊಡ್ಡ ಮುಷ್ಟಿಯೊಂದನ್ನು ತೋರಿಸುತ್ತ "ನಾನು ಮಾವನನ್ನು ಜಜ್ಜಿ ಬಿಡುವೆನು" ಎನ್ನುತ್ತಿದ್ದನು. ಮಿನಿ ಮಾವ ಎಂಬ ಹೆಸರ ಯಾವನೋ ಒಬ್ಬ ಅಪರಿಚಿತ ಪ್ರಾಣಿಯ ದುರವಸ್ಥೆ ನೆನಸಿಕೊಂಡು ಅತಿಯಾಗಿ ನಗುವಳು.

ಶುಭ್ರ ಶರತ್‌ಕಾಲ. ಹಿಂದಿನ ಕಾಲದಲ್ಲಿ ರಾಜ ಮಹಾರಾಜರುಗಳು ವಿಜಯಯಾತ್ರೆ ಹೊರಡುತ್ತಿದ್ದುದು ಈ ಕಾಲದಲ್ಲೇ. ನಾನು ಕಲಕತ್ತೆ ಬಿಟ್ಟು ಎಂದೂ ಎಲ್ಲೂ ಹೋದವನಲ್ಲ. ಆದರೆ ಆ ಕಾರಣದಿಂದಲೇ ನನ್ನ ಮನಸ್ಸು ಪ್ರಪಂಚವನ್ನೆಲ್ಲಾ ಸಂಚರಿಸುತ್ತಿತ್ತು ನಾನು ನನ್ನ ಮನೆಯ ಮೂಲೆಯಿಂದಲೇ ಸದಾ ಸಂಚರಿಸುವವ. ಹೊರಗಣ ಪ್ರಪಂಚದ ವಿಷಯವಾಗಿ ನನ್ನ ಮನಸ್ಸು ಸರ್ವದಾ ಹಂಬಲಿಸುತ್ತಿತ್ತು. ಯಾವದಾದರೊಂದು ವಿದೇಶದ ಹೆಸರು ಕೇಳಿದೊಡನೆಯೇ ನನ್ನ ಮನಸ್ಸು ಅಲ್ಲಿಗೆ ಹಾರಿಹೋಗುತ್ತಿತ್ತು. ಹಾಗೆಯೇ ವಿದೇಶೀಯರನ್ನು ಕಂಡೊಡನೆಯೇ ಮನದಲ್ಲಿ ನದಿ, ಪರ್ವತ, ಅರಣ್ಯಗಳ ನಡುವೆ ಒಂದು ಕುಟೀರದ ದೃಶ್ಯ ಉದಯಿಸುತ್ತಿತ್ತು. ಒಂದು ಉಲ್ಲಾಸಭರಿತ ಸ್ವಾಧೀನಜೀವನದ ಸಂಗತಿ ಮನಸ್ಸಿನಲ್ಲಿ ಮೂಡುತ್ತಿತ್ತು.

ನನ್ನ ಸ್ವಭಾವ ಗಿಡಮರಗಳ ತರಹದ್ದು. ನನ್ನ ಮೂಲೆ ಬಿಟ್ಟು ಒಮ್ಮೆ ಹೊರಗೆ ಹೋಗುವುದೆಂದರೂ ತಲೆಯ ಮೇಲೆ ಸಿಡಿಲೆರಗಿದಂತೆ ಅನಿಸುತ್ತಿತ್ತು. ಇದರಿಂದ ಬೆಳಗಿನ ಹೊತ್ತು ನನ್ನ ಕೋಣೆಯಲ್ಲಿ ಮೇಜಿನ ಮುಂದೆ ಕುಳಿತು ಈ ಕಾಬೂಲಿಯೊಡನೆ ಮಾತನಾಡುವುದರಲ್ಲಿ ನನ್ನ ಆಸೆಯು ಬಹು ಅಂಶ ತೃಪ್ತಿಯಾಗುತ್ತಿತ್ತು. ಇಕ್ಕೆಲದಲ್ಲೂ ದುತ್ತರ ದುರ್ಗಮ ದಗ್ಧ ರಕ್ತವರ್ಣದ ಗಿರಿಶ್ರೇಣಿ. ಮಧ್ಯೆ ಕಿರಿದಾದ ಕಣಿವೆಯ ದಾರಿ. ಹೇರು ತುಂಬಿದ ಒಂಟೆಗಳ ಸಾಲುಗಳು ನಡೆಯುತ್ತಿವೆ. ಪಗಡಿ ಧರಿಸಿದ ವರ್ತಕರು, ಪ್ರಯಾಣಿ

ಕರು ಒಂಟೆಗಳ ಮೇಲೋ ಕಾಲು ನಡಿಗೆಯಲ್ಲೋ ಮುಂದುವರಿಯುತ್ತಿರುವರು. ಒಬ್ಬನಕೈಯಲ್ಲಿ ಭರ್ಜಿ ಇದ್ದರೆ ಇನ್ನೊಬ್ಬನ ಕೈಯಲ್ಲಿ ಹಳೆಯ ಕಾಲದ ಚಕಮುಕಿಯಿಂದ ಹತ್ತಿಸುವ ಕೋವಿ. ಕಾಬೂಲಿನವನು ಮೇಘಮಂದ್ರ ಸ್ವರದಲ್ಲಿಮುರುಕು ಬಂಗಾಳಿಯಲ್ಲಿ ಸ್ವದೇಶದ ಕತೆ ಹೇಳುತ್ತಿದ್ದನು ನನ್ನ ಕಣ್ಣೆದಿರಿನಲ್ಲಿ ಈ ಚಿತ್ರಗಳು ಒಂದರ ಹಿಂದೊಂದು ಮುಂದುವರಿಯುತ್ತಿದ್ದುವು.

ಮಿನಿಯ ತಾಯಿ ಬಹು ಸಂದೇಹ ಸ್ವಭಾವದ ಹೆಂಗಸು ಗದ್ದಲವೇನಾದರೂ ಕೇಳಿಸಿದರಾಯಿತು– ಲೋಕದ ಕುಡುಕರೆಲ್ಲಾ ನಮ್ಮ ಮನೆಯನ್ನು ಉದ್ದೇಶಿಸಿಯೇ ಬರುತ್ತಿರುವರು ಎಂದು ತೀರ್ಮಾನಿಸುವಳು. ಈ ಪ್ರಪಂಚವು ಕಳ್ಳರು, ದರೋಡೆಗಾರರು, ಕುಡುಕರು, ಹಾವು, ಹುಲಿ, ಮಲೇರಿಯಾ, ಕಂಬಳಿಹುಳು, ಜಿರಳೆ, ಬಿಳಿಯ ಜನ ಇವರುಗಳಿಂದ ಎಲ್ಲೆಡೆಯೂ ತುಂಬಿರುವುದೆಂದು ಅವಳ ಭಾವನೆ ಇಷ್ಟು ವರ್ಷಗಳು ಈ ಪ್ರಪಂಚದ ಮೇಲೆ ಬದುಕಿದ್ದೂ (ಅವಳು ಮುದುಕಿಯೇನೂ ಅಲ್ಲ) ಅವಳ ಮನಸ್ಸಿನ ಈ ಭ್ರಮೆ ದೂರವಾಗಿರಲಿಲ್ಲ.

ರಹಮತ್ ಕಾಬೂಲಿವಾಲಾನ ವಿಷಯದಲ್ಲಿ ಅವಳು ಪೂರ್ಣ ನಿಸ್ಸಂಶಯಳಾಗಿರಲಿಲ್ಲ. ಅವನ ಮೇಲೆ ಕಣ್ಣಿಟ್ಟಿರಲೇ ಬೇಕೆಂದು ಅವಳು ಅಡಿಗಡಿಗೆ ನನ್ನೊಡನೆ ಹೇಳುತ್ತಿದ್ದಳು ಅವಳ ಸಂದೇಹಗಳನ್ನು ನಾನು ನಗುವಿನಲ್ಲಿ ಹಾರಿಸಲು ಯತ್ನಿಸಿದರೆ ಅವಳು ಒಂದರಹಿಂದೊಂದರಂತೆ ನನಗೆ ಪ್ರಶ್ನೆ ಹಾಕುತ್ತಿದ್ದಳು "ಎಂದೂ ಯಾರದೂ ಮಗು ಕಳುವಾಗಿಲ್ಲವೇನು ? ಕಾಬೂಲ್ ದೇಶದಲ್ಲಿ ಗುಲಾಮರ ವ್ಯಾಪಾರ ಪ್ರಚಾರದಲ್ಲಿಲ್ಲವೇ? ಒಬ್ಬ ದೊಡ್ಡ ಕಾಬೂಲಿಗೆ ಒಂದು ಸಣ್ಣ ಮಗುವನ್ನು ಕದ್ದುಕೊಂಡು ಹೋಗುವುದು ಅಸಾಧ್ಯವಾದ ವಿಷಯವೇ ? " ಇತ್ಯಾದಿ.

ಸಂಗತಿ ಅಸಂಭವವಲ್ಲವೆಂದು ನಾನು ಒಪ್ಪಿಕೊಳ್ಳಬೇಕಾಯಿತು. ಆದರೆ ನಂಬತಕ್ಕದ್ದಲ್ಲವೆಂದೆ. ನಂಬುವ ಶಕ್ತಿ ಎಲ್ಲರಿಗೂ ಒಂದೇ ಸಮವಾಗಿಲ್ಲ ನನ್ನ ಹೆಂಡತಿಯ ಮನಸ್ಸಿನಲ್ಲಿ ಭಯ ನೆಲಸಿಯೇ ಇತ್ತು. ಆದರೆ ಇದಕ್ಕಾಗಿ ದೋಷವಿಲ್ಲದ ರಹಮತನನ್ನು ನಮ್ಮ ಮನೆಗೆ ಬರಲು ಅಡ್ಡಿ ಮಾಡುವುದು ನನ್ನಿಂದ ಸಾಧ್ಯವಿಲ್ಲವಾಯಿತು.

ವರ್ಷಂಪ್ರತಿ ಮಾಘ ಮಾಸದಲ್ಲಿ ರಹಮತನು ಸ್ವದೇಶಕ್ಕೆ ಹಿಂದಿರುಗುತ್ತಿದ್ದನು ಈ ಕಾಲದಲ್ಲಿ ತನಗೆ ಬರಬೇಕಾದ ಹಣ ವಸೂಲು ಮಾಡುವು

ದರಲ್ಲಿ ಅತ್ಯಂತ ವ್ಯಸ್ತನಾಗಿರುತ್ತಿದ್ದನು. ಮನೆ ಮನೆ ತಿರುಗಬೇಕಾಗಿತ್ತು. ಆದರೂ ದಿನಕ್ಕೊಮ್ಮೆ ಬಂದು ಮಿನಿಯ ದರ್ಶನ ಮಾಡಿ ಹೋಗುತ್ತಿದ್ದನು. ನೋಡಿದರೆ ಅವರಿಬ್ಬರಲ್ಲಿ ಏನೋ ಒಂದು ಒಳಸಂಚು ನಡೆಯುತ್ತಿದೆಯೆಂಬ ಭಾವನೆ ಉಂಟಾಗುತ್ತಿತ್ತು. ಬೆಳಗ್ಗೆ ಬರಲಾಗದಿದ್ದ ದಿನ ಸಂಜೆಯಲ್ಲಿ ಬರುತ್ತಿದ್ದನು. ಕತ್ತಲೆಯಲ್ಲಿ ಕೊಠಡಿಯ ಮೂಲೆಯಲ್ಲಿ ಆ ದೊಗಳೆ ಶರಾಯಿ ಜುಬ್ಬತೊಟ್ಟ, ಚೀಲಗಳನ್ನು ಹೊತ್ತಿದ್ದ. ಆ ಎತ್ತರದ ಮನುಷ್ಯನನ್ನು ಕಂಡಾಗ ನಿಜವಾಗಿಯೇ ಮನಸ್ಸಿನಲ್ಲಿ ಒಂದು ಶಂಕೆ ತಲೆದೋರುತ್ತಿತ್ತು.

ಆದರೆ ಮಿನಿಯು 'ಕಾಬೂಲಿವಾಲಾ ! ಓ ಕಾಬೂಲಿವಾಲಾ!' ಎಂದು ನಗುನಗುತ್ತ ಬರುವುದನ್ನೂ, ವಯಸ್ಸಿನಲ್ಲಿ ಬಹು ಭೇದವುಳ್ಳ ಈ ಇಬ್ಬರಲ್ಲಿ ಎಂದಿನಂತೆ ಸರಳ ಹಾಸ್ಯ ನಡೆಯುವದನ್ನೂ ಕಂಡಾಗ ಮನಸ್ಸು ಸಂಪೂರ್ಣವಾಗಿ ಪ್ರಸನ್ನವಾಗುತ್ತಿತ್ತು.

ಒಂದು ದಿನ ಬೆಳಗ್ಗೆ ನನ್ನ ಕೊಠಡಿಯಲ್ಲಿ ಕುಳಿತು ಪ್ರೂಫ್‌ಗಳನ್ನು ತಿದ್ದುತ್ತಿದ್ದೆ. ಹೊರಟು ಹೋಗುವ ಮುಂಚೆ ಈ ಎರಡು ಮೂರು ದಿನಗಳಿಂದ ಛಳಿ ಬಹಳ ಹೆಚ್ಚಾಗಿತ್ತು. ನಾಲ್ಕೂಕಡೆಗೂ ಹಿ – ಹೀಕಾರ ನೆಲಸಿಬಿಟ್ಟಿತ್ತು ಕಿಟಕಿಯಿಂದ ಬೆಳಗಿನ ಬಿಸಿಲು ಮೇಜಿನಕೆಳಗೆ ನನ್ನ ಕಾಲಮೇಲೆ ಬಂದು ಬಿದ್ದಿತ್ತು. ಆ ಶಾಖ ಆನಂದಕರವಾಗಿತ್ತು. ಬೆಳಗ್ಗೆ ಎಂಟು ಹೊಡೆದಿರಬಹುದು ತಲೆಗೆ ಸುತ್ತಿಕೊಂಡಿರುವ ಉಷಾಚರರ ಸಮೂಹ ತಮ್ಮ ಸಂಚಾರ ಮುಗಿಸಿ ಹಿಂತಿರುಗುತ್ತಲಿತ್ತು ಈ ವೇಳೆಯಲ್ಲಿ ಬೀದಿಯಲ್ಲಿ ಗಲಭೆ ಕೇಳಿಸಿತು.

ಇಣಿಕಿ ನೋಡಿದ. ನಮ್ಮ ರಹಮತನನ್ನು ಇಬ್ಬರು ಪೋಲೀಸಿನವರು ಕಟ್ಟಿ ಹಿಡಿದುಕೊಂಡು ಹೋಗುತ್ತಿದ್ದರು. ಅವರ ಹಿಂದೆ ಹುಡುಗರ ಗುಂಪು ಹೋಗುತ್ತಿತ್ತು. ರಹಮತನ ಬಟ್ಟೆಯಲ್ಲಿ ರಕ್ತದ ಕಲೆಯಿತ್ತು. ಪೋಲೀಸಿನವನೊಬ್ಬನ ಕೈಯಲ್ಲಿ ರಕ್ತದಿಂದ ತೊಯ್ದ ಚೂರಿಯೊಂದಿತ್ತು. ನಾನು ಬಾಗಿಲ ಹೊರಗೆ ಹೋಗಿ ಪೋಲೀಸಿನವನನ್ನು ನಿಲ್ಲಿಸಿ ಸಂಗತಿಯೇನೆಂದು ಕೇಳಿದ.

ಸ್ವಲ್ಪ ಅವನಿಂದ ಇನ್ನಷ್ಟು ರಹಮತನಿಂದ ಕೇಳಿ ತಿಳಿದೆ. ನಮ್ಮ ಕೇರಿಯಲ್ಲೊಬ್ಬನು ರಾಂಪುರದ ಕಂಬಳಿಯದಾಗಿ ರಹಮತನಿಗೆ ಬಾಕಿ ಕೊಡಬೇಕಾಗಿತ್ತಂತೆ. ಸುಳ್ಳು ಹೇಳಿ ಆ ಸಾಲ ದಕ್ಕಿಸಿಕೊಳ್ಳಲು ಅವನು ಯತ್ನಿಸಿದನಂತೆ. ಇಬ್ಬರಿಗೂ ಮಾತು ನಡೆದು ಕೈ ಕೈ ಕಲೆತು ಕೊನೆಗೆ ರಹಮತನು ಅವನನ್ನು ಚೂರಿಯಿಂದ ತಿವಿದನಂತೆ.

ಆ ಸುಳ್ಳನನ್ನುದ್ದೇಶಿಸಿ ರಹಮತನು ತರತರದ ಬೈಗಳನ್ನು ಉಪಯೋಗಿಸುತ್ತಿದ್ದನು. ಆ ಸಮಯಕ್ಕೆ 'ಕಾಬೂಲಿವಾಲಾ, ಓ ಕಾಬೂಲಿವಾಲಾ' ಎಂದು ಕೂಗುತ್ತಾ ಮನೆಯೊಳಗಿಂದ ಮಿನಿ ಬಂದಳು.

ಕ್ಷಣಮಾತ್ರದಲ್ಲಿ ರಹಮತನ ಮುಖ ಕೌತುಕ ಮತ್ತು ಹಾಸ್ಯದಿಂದ ಅರಳಿತು. ಇಂದು ಅವನ ಹೆಗಲಮೇಲೆ ಚೀಲವಿರಲಿಲ್ಲ. ಚೀಲದ ವಿಷಯವಾದ ಅವರ ಪದ್ಧತಿಯ ಪ್ರಶ್ನೋತ್ತರಕ್ಕೆ ಎಡೆಯಿರಲಿಲ್ಲ. ಮಿನಿ ಒಮ್ಮೆಗೇ ಅವನನ್ನು "ನೀನು ಮಾವನ ಮನೆಗೆ ಹೋಗುವೆಯೋ?" ಎಂದು ಕೇಳಿದಳು.

ರಹಮನು ನಗುತ್ತ 'ಅಲ್ಲಿಗೇ ಹೋಗುತ್ತಿದ್ದೇನೆ' ಎಂದನು. ಈ ಉತ್ತರ ಕೇಳಿ ಮಿನಿ ನಗಲಿಲ್ಲವೆಂಬುದನ್ನು ಕಂಡು ಅವನು ಕೈತೋರುತ್ತ "ಮಾವನನ್ನು ಬಡಿಯುತ್ತಿದ್ದೆ. ಏನು ಮಾಡಲಿ, ಕೈ ಕಟ್ಟಿದೆ" ಎಂದನು.

ಅಪಾಯಕರವಾದ ಏಟು ಕೊಟ್ಟುದರ ಫಲವಾಗಿ ರಹಮತನಿಗೆ ಕೆಲವು ವರ್ಷಗಳ ಶಿಕ್ಷೆಯಾಯಿತು.

ನಾವು ಒಂದು ವಿಧದಲ್ಲಿ ಅವನ ಸಂಗತಿ ಮರೆತೆವು. ನಾವುಗಳು ಕುಳಿತು ಚಿರಕಾಲದ ಅಭ್ಯಾಸದಂತೆ ನಿತ್ಯಕರ್ಮದಲ್ಲಿ ದಿನದ ಮೇಲೆ ದಿನ ಕಳೆಯುತ್ತಿದ್ದೆವು. ಆ ವೇಳೆಯಲ್ಲಿ ಸ್ವೇಚ್ಛೆಯಾಗಿ ಬೆಟ್ಟ ಗುಡ್ಡಗಳಲ್ಲಿ ತಿರುಗಾಡುತ್ತಿದ್ದ ಮನುಷ್ಯನೊಬ್ಬನು ಜೈಲಿನ ಗೋಡೆಗಳ ಮಧ್ಯೆ ಯಾವ ರೀತಿಯಲ್ಲಿ ವರ್ಷಗಳನ್ನು ಕಳೆಯುವನೆಂಬ ಸಂಗತಿ ನಮ್ಮ ಮನದಲ್ಲಿ ಉದಯಿಸಲಿಲ್ಲ.

ಚಂಚಲಹೃದಯೆ ಮಿನಿಯ ಆಚರಣೆ ಅತ್ಯಂತ ನಾಚಿಕೆಗೇಡಿನದೆಂಬ ಸಂಗತಿಯನ್ನು ಅವರ ಅಪ್ಪನೂ ಒಪ್ಪದೆ ವಿಧಿಯಿಲ್ಲ. ಅವಳು ಸ್ವಚ್ಛಂದದಿಂದ ತನ್ನ ಹಳೆಯ ಸ್ನೇಹಿತನನ್ನು ಮರೆತು ಮೊದಲು ಕಾಸ್ತಾರ ನಬಿಯೊಡನೆ ಸ್ನೇಹ ಬೆಳೆಸಿದ್ದಳು. ಅನಂತರ ಕ್ರಮೇಣ ವಯಸ್ಸು ಹೆಚ್ಚುತ್ತ ಬಂದಂತೆಲ್ಲ ಅವಳ ಸ್ನೇಹಿತರೂ ಒಬ್ಬರನಂತರ ಒಬ್ಬರು ಬದಲಾವಣೆ ಆಗುತ್ತಿದ್ದರು. ಹೆಚ್ಚೇಕೆ, ಈಗ ಅವಳ ತಂದೆಯ ಬರೆಯುವ ಕೊಠಡಿಯಲ್ಲೂ ಅವಳನ್ನು ಕಾಣಲು ಸಾಧ್ಯವಿರಲಿಲ್ಲ.

ಕೆಲವು ವರ್ಷಗಳು ಕಳೆದುವು. ಇನ್ನೊಂದು ಶರತ್ಕಾಲ ಆರಂಭಿಸಿತು. ಮಿನಿಯ ಮದುವೆ ನಿಶ್ಚಯವಾಗಿದೆ. ದುರ್ಗಾಪೂಜೆಯ ರಜದಲ್ಲೇ ಅವಳ ಮದುವೆ ಆಗಲಿದೆ. ಕೈಲಾಸವಾಸಿನಿ ಗಿರಿಜೆಯ ಸಂಗಡಲೇ ನಮ್ಮ ಮನೆಯ ಆನಂದಮಯಿಯೂ ತಂದೆಯ ಮನೆಯನ್ನು ಅಂಧಃಕಾರಗೊಳಿಸಿ ಗಂಡನ ಮನೆಗೆ ಹೊರಡುವಳು.

ಬಹು ಅಂದವಾಗಿ ಬೆಳಗಾಗಿತ್ತು. ಮಳೆಯನಂತರ ಈ ಶರತ್ಕಾಲದ ನೂತನ ಧೌತ ಹೊಂಬಿಸಿಲು ಕರಗಿಸಿದ ಅಪರಂಜಿಯಂತೆ ಹೊಳೆಯುತ್ತಿತ್ತು. ಕಲ್ಕತ್ತೆಯ ಸಂದಿಗಳ ಮುರಿದ ಇಟ್ಟಿಗೆಗಳ ನಾಜೂಕಿಲ್ಲದ ಕಟ್ಟಡಗಳ ಮೇಲೂ ಈ ಬಿಸಿಲಿನ ಕಾಂತಿ ಒಂದು ಅಪೂರ್ವ ಲಾವಣ್ಯವನ್ನು ತೋರುತ್ತಿತ್ತು.

ಮುಂಜಾನೆಯಿಂದ ನಮ್ಮ ಮನೆಯಲ್ಲಿ ಸನಾಯಿಯ ಶಬ್ದ. ಆ ಕೊಳಲಿನಾದ ನನ್ನ ಎದೆಗೂಡಿನ ಎಲುಬುಗಳೊಳಗಿಂದ ಅಳುತ್ತಳುತ್ತ ಹೊರಬೀಳುತ್ತಿದ್ದ ಕರುಣಭೈರವೀ ರಾಗಿಣಿಯಲ್ಲಿ ನನ್ನ ಆಸನ್ನವಿಚ್ಛೇದ ವ್ಯಥೆಯನ್ನು ಶರತ್ಕಾಲದ ಬಿಸಿಲಿನೊಡನೆ ಸಮಸ್ತ ಜಗತ್ತಿನಲ್ಲಿ ತುಂಬುತ್ತಿತ್ತು. ಇಂದು ನಮ್ಮ ಮಿನಿಯ ಮದುವೆ.

ಬೆಳಗಿನಿಂದ ಬಹು ಗದ್ದಲ. ಜನರ ಓಡಾಟ. ಅತ್ತ ಬೊಂಬುಗಳನ್ನು ನೆಟ್ಟು ಚಪ್ಪರ ಹಾಕುವ ಕೆಲಸ ನಡೆಯುತ್ತಿದೆ. ಮನೆಯ ಕೊಠಡಿ ಕೊಠಡಿಗಳಲ್ಲಿ ಗುಳೋಪುಗಳನ್ನು ನೇತುಹಾಕುವ ಸದ್ದು ಟಿನ್ ಟಿನ್ ಎಂದು ಕೇಳಿಸುತ್ತಿತ್ತು. ಕೂಗಾಟ ಚೀರಾಟಗಳಿಗೆ ಕೊನೆಯೊವಲಿಲ್ಲ.

ಬರೆಯುವ ಕೋಣೆಯಲ್ಲಿ ಕುಳಿತು ಲೆಕ್ಕ ನೋಡುತ್ತಿದ್ದೆ. ಆ ವೇಳೆ ರಹಮತನು ಬಂದು ಸಲಾಮು ಮಾಡಿ ನಿಂತುಕೊಂಡನು.

ಮೊದಲು ಅವನನ್ನು ಗುರ್ತಿಸಲು ನನಗಾಗಲಿಲ್ಲ. ಹೆಗಲಮೇಲೆ ಜೋಳಿ ವಿಲ್ಲ. ಅವನ ಆ ಉದ್ದನಾದ ಕೂದಲಿರಲಿಲ್ಲ. ಮೈಯಲ್ಲಿ ಮೊದಲಿನ ತೇಜಸ್ಸಿರಲಿಲ್ಲ. ಕೊನೆಗೆ ಅವನ ನಗುವನ್ನು ಕಂಡು ಅವನನ್ನು ಗುರುತಿಸಿದೆ. 'ಏನಪ್ಪಾ ರಹಮತ್, ಯಾವಾಗ ಬಂದೆ?' ಎಂದು ಕೇಳಿದೆ. 'ನಿನ್ನೆ ಸಂಜೆ ಜೈಲಿನಿಂದ ಬಿಡುಗಡೆಯಾಯಿತು' ಎಂದು ಅವನು ಹೇಳಿದನು. ಆ ಮಾತುಗಳನ್ನು ಕೇಳಿ ಮನಸ್ಸಿನಲ್ಲಿ ಜುಂ ಎಂದಿತು. ಕೊಲೆಗಡುಕನ್ನಾದವನನ್ನು ಇದಿರಿನಲ್ಲಿ ಎಂದೂ ಕಂಡವನಲ್ಲ. ಇವನನ್ನು ಕಂಡು ಅಂತರಂಗ ಸಂಕೋಚಗೊಂಡಿತು. ಇಂದಿನಂತಹ ಶುಭದಿನದಲ್ಲಿ ಈ ಮನುಷ್ಯ ಇಲ್ಲಿಂದ ಹೋದರೆ ಉತ್ತಮ ಎಂದು ನನ್ನ ಮನಸ್ಸಿಗೆ ತೋರಿತು.

"ಇವತ್ತು ನಮ್ಮ ಮನೆಯಲ್ಲಿ ಹೆಚ್ಚು ಕೆಲಸವಿದೆ. ನನಗೆ ಈಗ ವಿರಾಮವಿಲ್ಲ. ನೀನು ಈಗ ಹೋಗು" ಎಂದು ಅವನಿಗೆ ಹೇಳಿದೆ

ಒಡನೆಯೇ ಅವನು ಹೊರಟುಹೋಗಲುದ್ಯುಕ್ತನಾದನು. ಬಾಗಿಲ ಹತ್ತಿರ ಹೋಗಿ ಸ್ವಲ್ಪ ಹೊತ್ತು ಸಂದೇಹಿಸಿ "ಒಮ್ಮೆ ಹುಡುಗಿಯನ್ನು ನೋಡಲು ಸಾಧ್ಯವಿಲ್ಲವೇ?" ಎಂದನು

"ಮಿನಿ ಹಿಂದಿನಂತೆಯೇ ಇರುವಳು. ಮುಂಚಿನಂತೆಯೇ 'ಕಾಬೂಲಿ ವಾಲಾ! ಓ ಕಾಬೂಲಿವಾಲಾ!' ಎಂದು ಕೂಗಿಕೊಂಡು ಓಡಿಬರುವಳು. ತಮ್ಮ ಅತ್ಯಂತ ಕೌತುಕಪ್ರದವಾದ ಹಳೆಯ ಹಾಸ್ಯಾಲಾಪದಲ್ಲಿ ಬದಲಾವಣೆಯಾಗದು" ಎಂದು ಅವನ ಮನಸ್ಸಿನ ಎಣಿಕೆಯಾಗಿತ್ತೆಂದು ನನ್ನ ಭಾವನೆ. ಅಷ್ಟೇ ಅಲ್ಲ. ಹಳೆಯ ಸ್ನೇಹವನ್ನು ನೆನಸಿಕೊಂಡು ತಮ್ಮ ದೇಶದವನ್ಯಾವನನ್ನೋ ಬೇಡಿ ಗೋಗರೆದು ಒಂದು ಪೆಟ್ಟಿಗೆ ಚಪ್ಪರ ದ್ರಾಕ್ಷಿ ಮತ್ತು ಒಂದು ಪೊಟ್ಲದಲ್ಲಿ ಬಾದಾಮಿ ಪಿಸ್ತಗಳನ್ನು ಸಂಗ್ರಹಿಸಿ ತಂದಿದ್ದನು. ಅವನ ಆ ಸ್ವಂತ ಜೋಳಿ ಈಗ ಇರಲಿಲ್ಲ.

'ಮನೆಯಲ್ಲಿ ಇಂದು ಹೆಚ್ಚುಗಟ್ಟಳೆ. ಇಂದು ಯಾರನ್ನೂ ನೋಡಲು ಅವಕಾಶವಿರದು' ಎಂದು ನಾನು ಹೇಳಿದೆ. ಅವನು ಸ್ವಲ್ಪ ನೊಂದುಕೊಂಡಂತೆ ತೋರಿತು. ಸ್ತಬ್ಧನಾಗಿ ನಿಂತಿದ್ದು ಒಮ್ಮೆ ಸ್ಥಿರದೃಷ್ಟಿಯಿಂದ ನನ್ನ ಮುಖ ನೋಡಿದನು. ಅನಂತರ 'ಬಾಬೂ ಸಲಾಮ್' ಎಂದು ಹೇಳಿ ಬಾಗಿಲಿನಿಂದ ಹೊರಗೆ ಹೋದನು.

ನನ್ನ ಮನಸ್ಸಿನಲ್ಲಿ ಉಳುಕಿತು. ಅವನನ್ನು ಹಿಂದಕ್ಕೆ ಕರೆಯಬೇಕೆಂದು ಯೋಚಿಸುತ್ತಿದ್ದೆ. ಆ ವೇಳೆಗೆ ಅವನು ತಾನಾಗಿಯೇ ಹಿಂತಿರುಗಿ ಬರುತ್ತಿದ್ದುದನ್ನು ಕಂಡೆನು.

"ಈ ದ್ರಾಕ್ಷಿ ಬಾದಾಮಿಗಳನ್ನು ಹುಡುಗಿಗಾಗಿ ತಂದಿದ್ದೆ. ಇವನ್ನು ಅವಳಿಗೆ ಕೊಡುವಿರಾ?" ಎಂದನು. ಅವುಗಳನ್ನು ತೆಗೆದುಕೊಂಡು ಬೆಲೆ ಕೊಡಲು ಯತ್ನಿಸಿದೆನು. ಅವನು ನನ್ನ ಕೈಯನ್ನು ತಡೆದು "ನಿಮ್ಮ ಉಪಕಾರ ನನಗೆ ಚಿರಕಾಲ ನೆನಪಿರುವುದು. ದಯವಿಟ್ಟು ನನಗೆ ಹಣ ಕೊಡಬೇಡಿರಿ" ಎಂದು ಹೇಳಿದನು.

"ಬಾಬೂ! ನಿಮಗೊಬ್ಬಳು ಮಗಳಿರುವಂತೆಯೇ ನನಗೂ ದೇಶದಲ್ಲಿ ಹುಡುಗಿಯೊಬ್ಬಳಿರುವಳು. ಅವಳ ಮುಖವನ್ನು ನೆನೆದು ನಾನು ನಿಮ್ಮ ಮಗಳಿಗೆ ಅಷ್ಟಿಷ್ಟು ಹಣ್ಣುಗಳನ್ನು ತಂದುಕೊಡುತ್ತಿರುವೆ. ನಾನಿಲ್ಲಿ ವ್ಯಾಪಾರಕ್ಕಾಗಿ ಬರುತ್ತಿಲ್ಲ" ಎಂದನು. ಹೀಗೆ ಹೇಳಿ ತನ್ನ ದೊಗಳೆ ಜುಬ್ಬಾದ

ಜೇಬಿನಲ್ಲಿ ಕೈಹಾಕಿ ಎದೆಯ ಹತ್ತಿರದಿಂದ ಕೊಳಕಾದ ಒಂದು ತುಂಡು ಕಾಗದ ಹೊರಗೆ ತೆಗೆದನು. ಬಹು ಎಚ್ಚರಿಕೆಯಿಂದ ಮಡಿಕೆಗಳನ್ನು ಬಿಚ್ಚಿ ಎರಡು ಕೈಗಳನ್ನು ನನ್ನ ಮೇಜಿನ ಮೇಲಿಟ್ಟನು.

ನೋಡಿದೆ. ಕಾಗದದ ಮೇಲೆ ಒಂದು ಪುಟ್ಟ ಕೈಯ ಗುರುತಿತ್ತು. ಫೋಟೋ ಅಲ್ಲ. ತೈಲಚಿತ್ರವಲ್ಲ. ಕೈಯಲ್ಲಿ ಸ್ವಲ್ಪ ಮಸಿಬಳಿದು ಕಾಗದದ ಮೇಲೆ ಅದರ ಮುದ್ರೆ ಒತ್ತಿತ್ತು. ಮಗಳ ಈ ಗುರುತನ್ನು ಎದೆಯ ಬಳಿ ಇಟ್ಟುಕೊಂಡು ರಹಮತನು ವರ್ಷಂಪ್ರತಿ ಕಲ್ಕತ್ತೆಯ ಬೀದಿಗಳಲ್ಲಿ ಕಾಬೂಲಿನ ಹಣ್ಣುಗಳನ್ನು ಮಾರಲು ಬರುವನು. ಆ ಕೋಮಲ ಕ್ಷುದ್ರ ಶಿಶು ಹಸ್ತದ ಸ್ಪರ್ಶವು ಅವನ ವಿರಾಟ್ ವಿರಹೀ ವಕ್ಷದ ನಡುವೆ ಅಮೃತವನ್ನು ವರ್ಷಿಸುತ್ತಿತ್ತು.

ನೋಡಿ ನನ್ನ ಕಣ್ಣುಗಳಲ್ಲಿ ಕಂಬನಿ ತುಂಬಿದವು. ಅವನು ಕಾಬೂಲಿ ಹಣ್ಣು ಮಾರುವವ, ನಾನು ಬಂಗಾಳೀ ದೊಡ್ಡ ಮನುಷ್ಯ ಎಂಬುದನ್ನು ಮರೆತೆನು. ಅವನು ಯಾರು, ನಾನು ಯಾರು ಎಂಬುದನ್ನು ಅರಿತೆನು. ಅವನೊಬ್ಬ ಹೆಣ್ಣುಮಗುವಿನ ತಂದೆ; ನಾನೂ ಒಂದು ಮಗುವಿನ ತಂದೆ. ಅವನ ಪರ್ವತಗೃಹವಾಸಿನೀ ಪಾರ್ವತಿಯ ಆ ಕೈಗುರುತು ನಮ್ಮ ಮಿನಿಯನ್ನು ನೆನಪುಮಾಡಿಕೊಟ್ಟಿತು. ನಾನು ತಕ್ಷಣ ಅಂತಃಪುರದಿಂದ ಮಿನಿಯನ್ನು ಕರೆಸಿದೆನು. ಇದಕ್ಕೆ ಅಂತಃಪುರದಲ್ಲಿ ನಾನಾ ಆಕ್ಷೇಪಣೆಗಳು ತಲೆಯೆತ್ತಿದವು. ನಾನು ಯಾವುದನ್ನೂ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಮಂಗಳವಸ್ತ್ರಗಳನ್ನು ಧರಿಸಿ ಹಣೆಯಲ್ಲಿ ಗಂಧ ಹಚ್ಚಿಕೊಂಡು ವಧುವಿನ ವೇಷದಲ್ಲಿದ್ದ ಮಿನಿ ನಾಚಿಕೆಯೊಡನೆ ನನ್ನ ಹತ್ತಿರ ಬಂದು ನಿಂತಳು.

ಕಾಬೂಲಿವಾಲಾ ಅವಳನ್ನು ಕಂಡು ಬೆಪ್ಪಾದನು. ಮುಂಚಿನಂತೆ ಅವರ ಹಳೆಯ ಹಾಸ್ಯಾಲಾಪಕ್ಕೆ ಎಡೆಯೇ ಇರಲಿಲ್ಲ. ಕೊನೆಗೆ ಅವನು ನಗುತ್ತ "ಮಗೂ! ನೀನೂ ಮಾವನ ಮನೆಗೆ ಹೋಗುತ್ತೀಯೋ?" ಎಂದು ಕೇಳಿದನು.

ಮಿನಿಗೆ ಈಗ 'ಮಾವ' ಎಂಬ ಶಬ್ದದ ಅರ್ಥ ಗೊತ್ತು. ಹಿಂದಿನಂತೆ ಉತ್ತರ ಕೊಡಲು ಅವಳಿಗೆ ಸಾಧ್ಯವಾಗಲಿಲ್ಲ. ರಹಮತನ ಪ್ರಶ್ನೆ ಕೇಳಿ ನಾಚಿಕೆಯಿಂದ ಅವಳ ಮುಖ ಕೆಂಪಡರಿತು. ಕಾಬೂಲಿವಾಲಾನೊಡನೆ ಅವಳ ಮೊಟ್ಟಮೊದಲ ಭೇಟಿಯಾದ ದಿನದ ನೆನಪಾಯಿತು ನನಗೆ. ಮನಸ್ಸಿನಲ್ಲಿ ಯಾವುದೋ ವ್ಯಥೆಯಾಯಿತು.

ಮೀನಿ ಹೊರಟುಹೋದನಂತರ ಒಂದು ನಿಟ್ಟುಸಿರು ಬಿಟ್ಟು ರಹಮತನು ಕೆಳಗೆ ಕುಳಿತನು. ಈ ನಡುವೆ ಅವನ ಮಗಳೂ ಮೀನಿಯ ಹಾಗೆ ಬೆಳೆದಿರುವಳೆಂಬ ಸಂಗತಿ ಅವನಿಗೆ ಅಕಸ್ಮಾತ್ತಾಗಿ ಅರಿವಾಯಿತು. ಅವಳು ಬೆಳೆದಿರುವಳು ಅವಳೊಡನೆ ಅವನು ಹೊಸ ಪರಿಚಯ ಮಾಡಿಕೊಳ್ಳಬೇಕು ಮೊದಲಿನ ರೀತಿಯಲ್ಲಿ ಅವಳನ್ನು ಹೊಂದಲಾರ. ಈ ಎಂಟು ವರ್ಷಗಳಲ್ಲಿ ಅವಳ ಗತಿ ಏನಾಗಿದೆಯೋ ಯಾರು ಬಲ್ಲರು? ಬೆಳಗಿನ ವೇಳೆಯ ಶರತ್ಕಾಲದ ಎಳೆ ಬಿಸಿಲ ಕಾವಿನೊಡನೆ ಸನಾಯಿಯ ಶಬ್ದ ಕಿವಿಯನ್ನು ಸ್ಪರ್ಶಿಸಿತು. ರಹಮತನು ಕಲ್ಕತ್ತೆಯ ನಮ್ಮ ಚಿಕ್ಕ ಮನೆಯಲ್ಲಿ ಕುಳಿತು ಅಫ್ಘಾನಿಸ್ತಾನದ ಮಂಜುಕವಿದ ಒಂದು ಬೆಟ್ಟ ನೋಡತೊಡಗಿದನು.

ನಾನೊಂದು ನೋಟನ್ನು ತಂದು ಅವನಿಗೆ ಕೊಟ್ಟೆನು. "ರಹಮತ್, ನೀನು ನಿಮ್ಮ ಊರಿಗೆ ಮಗಳ ಹತ್ತಿರಕ್ಕೆ ಹೋಗು ನಿಮ್ಮಿಬ್ಬರ ಮಿಲನ ಸುಖದಿಂದ ನಮ್ಮ ಮೀನಿಗೆ ಒಳ್ಳೆಯದಾಗಲಿ" ಎಂದೆನು.

ಈ ಹಣದಾನ ಮಾಡಿ ಮದುವೆಯ ಆಡಂಬರದ ಒಂದೆರಡು ಅಂಶಗಳನ್ನು ಕಡಿಮೆಮಾಡಬೇಕಾಯಿತು. ಮನಸ್ಸಿನಲ್ಲಿ ಎಣಿಸಿದ್ದಂತೆ ಚಪ್ಪರದಲ್ಲಿ ಎಲೆಕ್ಟ್ರಿಕ್ ದೀಪದ ಮಾಲೆಗಳನ್ನು ಹತ್ತಿಸಲಾಗಲಿಲ್ಲ. ಇಂಗ್ಲಿಷ್ ಬ್ಯಾಂಡೂ ಬರಲಿಲ್ಲ. ಅಂತಃಪುರದಲ್ಲಿ ಹೆಂಗಸರು ಅತ್ಯಂತ ಅಸಂತೋಷ ತೋರ್ಪಡಿಸತೊಡಗಿದರು. ಆದರೆ ನಮ್ಮ ಮನೆಯ ಶುಭಕಾರ್ಯ ಮಂಗಳವಾದ ರೀತಿಯಲ್ಲಿ ನಿರ್ವಿಘ್ನವಾಗಿ ನೆರವೇರಿತು.

---

# ಅಕ್ಕ

## ೧

ಪಕ್ಕದ ಮನೆಯವಳೋ ಒಬ್ಬ ನಿರ್ಭಾಗ್ಯಳ ಅನ್ಯಾಯಕಾರೀ ಅತ್ಯಾಚಾರೀ ಗಂಡನ ದುರ್ನಡತೆಗಳೆಲ್ಲವನ್ನೂ ವಿಸ್ತಾರವಾಗಿ ವರ್ಣಿಸಿ ನೆರೆಮನೆಯ ತಾರೆ ಅತ್ಯಂತ ಸಂಕ್ಷೇಪವಾಗಿ ಸ್ವಂತ ಅಭಿಪ್ರಾಯ ಸೂಚಿಸುತ್ತ "ಇಂತಹ ಗಂಡನ ಬಾಯಿಗೆ ಬೆಂಕಿ ಹಾಕಿತು" ಎಂದಳು.

ಇದನ್ನು ಕೇಳಿ ಜಯಗೋಪಾಲ ಬಾಬುಗಳ ಹೆಂಡತಿ ಶಶಿ ಅತಿಯಾಗಿ ನೊಂದುಕೊಂಡಳು. ಗಂಡಸ ಬಾಯಲ್ಲಿ ಬೀಡಿಯ ಬೆಂಕಿಯಲ್ಲದೆ ಮತ್ತಾವ ವಿಧವಾದ ಬೆಂಕಿಯನ್ನಾದರೂ ಇರುವಂತೆ ಆಶಿಸುವದು ಹೆಂಗಸರ ಗೌರವಕ್ಕೆ ತಕ್ಕದ್ದಲ್ಲವೆಂದು ಅವಳ ಅಭಿಪ್ರಾಯ.

ಅವಳು ಸ್ವಲ್ಪ ಸಂಕೋಚ ತೋರಿದಳೋ ಇಲ್ಲವೋ, ಕಠಿಣಹೃದಯ ತಾರೆ ಇಮ್ಮಡಿ ಉತ್ಸಾಹದೊಡನೆ "ಇಂತಹ ಗಂಡನೊಡನೆ ಬಾಳುವುದಕ್ಕಿಂತ ಏಳು ಜನ್ಮ ವಿಧವೆಯಾಗಿರುವುದೇ ಮೇಲು" ಎಂದಳು. ಹೀಗೆ ಹೇಳಿ ಅವಳು ಸಭಾಭಂಗ ಮಾಡಿ ನಡೆದಳು.

ಗಂಡನ ವಿಷಯದಲ್ಲಿ ಇಂತಹ ಕಠಿಣ ಆಚರಣೆ ಆವಶ್ಯಕವಾಗುವಂತಹ ಅಪರಾಧವಾವುದೂ ಗಂಡಸರಲ್ಲಿ ಇರುವುದು ಸಾಧ್ಯವಿಲ್ಲವೆಂದು ಶಶಿ ಮನಸ್ಸಿನಲ್ಲಿ ಅಂದುಕೊಂಡಳು. ಹೀಗೆ ಆಲೋಚಿಸುತ್ತಿರುವಾಗ ಅವಳ ಕೋಮಲ ಹೃದಯದ ಸಮಸ್ತ ಪ್ರೀತಿರಸವೂ ವಿದೇಶದಲ್ಲಿದ್ದ ಅವಳ ಗಂಡನ ಕಡೆಗೆ ಹರಿಯಿತು. ಹಾಸಿಗೆಯಲ್ಲಿ ಅವಳ ಗಂಡ ಮಲಗುತ್ತಿದ್ದ ಭಾಗವನ್ನು ಕೈಯಿಂದ ಸವರಿ ದಿಂಬನ್ನು ಚುಂಬಿಸಿದಳು. ದಿಂಬಿನ ನಡುವೆ ಗಂಡನ ತಲೆಯ ಸುಗಂಧವನ್ನು ಅನುಭವಿಸಿದಳು. ಕೊಠಡಿಯ ಕದಮುಚ್ಚಿ ಪೆಟ್ಟಿಗೆಯಿಂದ ಗಂಡನ ಕೈಬರಹದ ಕೆಲವು ಕಾಗದಗಳನ್ನೂ, ಗಂಡನ ಹಳೆಯ ಚಿತ್ರವೊಂದನ್ನೂ ಹೊರಗೆ ತೆಗೆದಳು. ಅಂದಿನ ನಿಸ್ತಬ್ಧ ಮಧ್ಯಾಹ್ನದಲ್ಲಿ ಹೀಗೆ ಗೋಪ್ಯವಾಗಿದ್ದ ಕೊಠಡಿಯಲ್ಲಿ ಈ ಏಕಾಂಗಿಯ ಆಲೋಚನೆ ಹಿಂದಿನ ನೆನಪುಗಳಲ್ಲೂ ವಿಷಾದದ ಕಣ್ಣೀರಿನಲ್ಲೂ ಕಳೆಯಿತು.

ಶಶಿಕಲೆ ಮತ್ತು ಜಯಗೋಪಾಲ ಇವರುಗಳು ನೂತನ ದಂಪತಿಗಳೇನೂ ಅಲ್ಲ. ಬಾಲ್ಯದಲ್ಲೇ ಮದುವೆಯಾಗಿತ್ತು. ಈ ನಡುವೆ ಮಕ್ಕಳೂ ಆಗಿದ್ದವು. ಇಬ್ಬರೂ ದೀರ್ಘಕಾಲ ಒಟ್ಟಿಗೆ ವಾಸಮಾಡಿ ಅತಿ ಸಹಜ ಸಾಧಾರಣ ಭಾವದಲ್ಲಿ ದಿನ ಕಳೆದಿದ್ದರು. ಇಬ್ಬರಲ್ಲಿ ಯಾರಲ್ಲೂ ಎಲ್ಲೆ ಮೀರಿದ ಪ್ರೇಮದ ಉಚ್ಛ್ವಾಸದ ಲಕ್ಷಣ ಕಾಣಿಸುತ್ತಿರಲಿಲ್ಲ. ಹೆಚ್ಚುಕಡಮೆ ಹದಿನಾರು ವರ್ಷಗಳು ಒಂದೇ ಸಮನಾಗಿ ಕಳೆದಿದ್ದು ಅಕಸ್ಮಾತ್ತಾಗಿ ಅದೃಷ್ಟವಶದಿಂದ ಅವಳ ಗಂಡ ಪರದೇಶಕ್ಕೆ ಹೊರಟು ಹೋಗಲು ಶಶಿಯ ಮನದಲ್ಲಿ ಪ್ರಬಲ ಪ್ರೇಮಾವೇಗವೊಂದು ಉದಯಿಸಿತು. ವಿಯೋಗದ ಮೂಲಕ ಬಂಧನದಲ್ಲಿ ಎಷ್ಟು ಎಳೆತ ಉಂಟಾದರೂ ಕೋಮಲ ಹೃದಯದಲ್ಲಿ ಪ್ರೇಮದ ಗಂಟು ಅಷ್ಟು ಬಲವಾಗಿಯೇ ಬಿಗಿಯಿತು. ಸಾಧಾರಣ ಕಾಲದಲ್ಲಿ ಯಾರ ಇರುವಿಕೆಯನ್ನು

ಅರಿಯುತ್ತಿರಲಿಲ್ಲವೋ ಈಗ ವಿಯೋಗದಲ್ಲಿ ಅವನಿಲ್ಲದ ವೇದನೆ ಅಸಹನೀಯವಾಯಿತು.

ಆದ್ದರಿಂದಲೇ ಇಷ್ಟು ದಿನಗಳ ನಂತರ ಈ ವಯಸ್ಸಿನಲ್ಲಿ, ಮಕ್ಕಳ ತಾಯಿಯಾದ ಶಶಿಲೇಖೆಯು ವಸಂತ ಕಾಲದ ಮಧ್ಯಾಹ್ನದಲ್ಲಿ ನಿರ್ಜನ ಗೃಹದಲ್ಲಿ ವಿರಹ ಶಯ್ಯೆಯಲ್ಲಿ, ಹರೆಯದಲ್ಲಿ ಕಾಲಿಡುತ್ತಿದ್ದ ನವವಧುವಿನ ಸುಖ ಸ್ವಪ್ನವನ್ನು ಕಾಣಲೆತ್ನಿಸಿದಳು. ಯಾವ ಪ್ರೇಮವು ಅರಿವೇ ಆಗದೆ ಬಾಳುವೆಯ ಇದಿರಿನಲ್ಲಿ ಮುಂದುವರಿದಿದೆಯೋ ಅದರ ಕಲಗಿನ ಶಬ್ದವು ಇಂದು ಅಕಸ್ಮಾತ್ತಾಗಿ ಎಚ್ಚೆತ್ತು ಮನದಲ್ಲಿ ಅದರ ಹೊಳೆ ಹರಿಯಿಸಿ ಇಕ್ಕೆಲದಲ್ಲೂ ಬಹು ದೂರದವರೆಗೆ ಸ್ವರ್ಣಪುರಿ, ಹಲವು ಕುಂಜವನಗಳನ್ನು ನೋಡತೊಡಗಿತು ಆದರೆ ಕಣ್ಮರೆಯಾದ ಆ ಹೊಂಗನಸಿನ ರಾಜ್ಯದಲ್ಲಿ ಕಾಲಿಡಲು ಈಗ ಸಾಧ್ಯವಿಲ್ಲ. ಈ ಸಾರಿ ಗಂಡನು ಹಿಂತಿರುಗಿದರೆ ಬಾಳುವೆಯು ನೀರಸವೂ, ವ್ಯರ್ಥವೂ ಆಗಲು ಅವಕಾಶ ಕೊಡೆನೆಂದು ಮನದಲ್ಲಿ ಅಂದುಕೊಳ್ಳತೊಡಗಿದಳು. ಎಷ್ಟು ದಿನ ಎಷ್ಟು ಸಲ ತುಚ್ಛ ತರ್ಕದಲ್ಲಿ ಸಾಮಾನ್ಯ ಕಲಹದಲ್ಲಿ ಅವಳು ಗಂಡನನ್ನು ಹಿಂಸಿಸಿದ್ದಳೋ ಅದನ್ನು ನೆನಪು ಮಾಡಿಕೊಂಡು ಅನುತಪ್ತ ಹೃದಯದಿಂದ ಇಂದು ಮನಃಪೂರ್ವಕವಾಗಿ ಇನ್ನೆಂದಿಗೂ ಹಾಗೆ ಅಸಹಿಷ್ಣುತೆ ತೋರಿಸೆನೆಂದು ಸಂಕಲ್ಪಿಸಿಕೊಂಡಳು. ಗಂಡನ ಆಶೆಗೆ ಅಡ್ಡಬರುವುದಿಲ್ಲ. ಅವನ ಆದೇಶವನ್ನು ಪಾಲಿಸುವೆನು. ಪ್ರೀತಿಪೂರ್ಣ ನಮ್ರ ಹೃದಯದೊಡನೆ ಗಂಡನ ಒಳ್ಳೆಯ ಮತ್ತು ಕೆಟ್ಟ ನಡತೆಗಳೆಲ್ಲವನ್ನು ಸಹಿಸುವೆ. ಯಾಕೆಂದರೆ ಗಂಡನು ಸರ್ವಸ್ವ, ಗಂಡನು ಪ್ರಿಯತಮ, ಗಂಡನು ದೇವತೆ ಎಂದು ಸಂಕಲ್ಪಿಸಿಕೊಂಡಳು. ಶಶಿಕಲೆ ಬಹುದಿನಗಳ ವರೆಗೆ ತನ್ನ ತಾಯಿ ತಂದೆಗಳ ಪ್ರೀತಿಪಾತ್ರಳಾದ ಒಬ್ಬಳೇ ಮಗಳಾಗಿದ್ದಳು. ಆದ್ದರಿಂದಲೇ ಜಯಗೋಪಾಲನು ಸಣ್ಣ ಚಾಕರಿಯಲ್ಲಿದ್ದರೂ ಭವಿಷ್ಯತ್ತಿನ ವಿಷಯವಾಗಿ ಆಲೋಚಿಸಬೇಕಾಗಿರಲಿಲ್ಲ. ಹಳ್ಳಿಯಲ್ಲಿ ರಾಜನಂತೆ ಸುಖವಾಗಿ ಇರಲು ಅವನ ಮಾವನ ಆಸ್ತಿ ಸಾಕಾಗಿತ್ತು.

ಇಂತಹ ಸಮಯದಲ್ಲಿ ಸಂಪೂರ್ಣ ಅಕಾಲದಲ್ಲಿ ಶಶಿಕಲೆಯ ತಂದೆ ಕಾಲೀಪ್ರಸನ್ನನಿಗೆ ಒಂದು ಗಂಡುಮಗು ಹುಟ್ಟಿತು. ನಿಜಸ್ಥಿತಿ ಹೇಳುವುದಾದರೆ ತಾಯಿತಂದೆಗಳ ಈ ತರಹದ ಅನಪೇಕ್ಷಿತ ಅಸಂಗತ ಅನ್ಯಾಯದ ಆಚರಣೆಯಿಂದ ಶಶಿಯು ಮನದಲ್ಲಿ ಅತಿಯಾಗಿ ನೊಂದಳು. ಜಯಗೋಪಾಲನೂ ವಿಶೇಷವಾಗಿ ಪ್ರೀತಿ ತೋರಿಸಿದನೆಂದು ಹೇಳಲು ಅವಕಾಶವಿಲ್ಲ.

ಕೆಲ ದಿನಗಳಲ್ಲೇ ಹುಡುಗನ ತಾಯಿ ಸ್ವರ್ಗಸ್ಥಳಾದಳು. ಸಾಯುನ ಮುಂಚೆ ಆಕೆ ಮಗನನ್ನು ತನ್ನ ಮಗಳ ಉಡಿಯಲ್ಲಿ ಹಾಕಿ ಕಣ್ಣುಮುಚ್ಚಿದಳು. ಆ ತಾಯಿಯಿಲ್ಲದ ಹುಡುಗನು ವಿಳಂಬ ಮಾಡದೆ ಅನಾಯಾಸದಿಂದ ತನ್ನ ಅಕ್ಕನ ಹೃದಯವನ್ನು ವಶಪಡಿಸಿಕೊಂಡನು. ಅವನು ಹ, ಹ ಶಬ್ದದೊಡನೆ ತನ್ನ ಮೇಲೆ ನೆಗೆದು ಬಿದ್ದು ಅತಿ ಆತುರದೊಡನೆ ಹಲ್ಲಿಲ್ಲದ ಸಣ್ಣ ಬಾಯಿಯಲ್ಲಿ ಅವಳ ಬಾಯಿ ಮೂಗು ಎಲ್ಲವನ್ನೂ ನುಂಗಲು ಯತ್ನಿಸಿದಾಗ, ಪುಟ್ಟ ಹಿಡಿಯಲ್ಲಿ ತನ್ನ ಕೇಶಗುಚ್ಛವನ್ನು ಹಿಡಿದುಕೊಂಡು ಯಾವ ವಿಧದಲ್ಲೂ ಬಿಡದಿದ್ದಾಗ, ಸೂರ್ಯೋದಯಕ್ಕೆ ಮುಂಚೆಯೇ ಎಚ್ಚೆತ್ತು ತನ್ನ ಮೈಯಹತ್ತಿರ ಬಂದು ಕೋಮಲ ಕೈಗಳ ಸ್ಪರ್ಶದಿಂದ ಕಚಕುಳಿ ಇಕ್ಕುತ್ತಿದ್ದಾಗ, ಕ್ರಮೇಣ ತನ್ನನ್ನು ಜೀಜೀ, ಜೀಜಿಮಾ, ಎಂದು ಕರೆಯತೊಡಗಿದಾಗ, ಕೆಲಸ ಮಾಡುವ ವೇಳೆ ಮತ್ತು ವಿರಾಮದ ವೇಳೆಗಳಲ್ಲಿ ಮಾಡಬಾರದ್ದು ಮಾಡಿ, ತಿನ್ನಬಾರದ್ದು ತಿಂದು ಹೋಗಬಾರದೆಡೆ ಹೋಗುವುದರ ಮೂಲಕ ಹಿಂಸೆ ಕೊಡುತ್ತಿದ್ದಾಗ ಶಶಿಗೆ ತಡೆಯುವುದು ಅಸಾಧ್ಯವಾಗುತ್ತಿತ್ತು. ಆದರೆ ಈ ಸ್ವೇಚ್ಛಾಚಾರೀ ಕ್ಷುದ್ರ ಅತ್ಯಾಚಾರಿಯ ಬಳಿ ಸಂಪೂರ್ಣವಾಗಿ ಆತ್ಮಸಮರ್ಪಣೆ ಮಾಡಿದ್ದಳು. ಹುಡುಗನಿಗೆ ತಾಯಿ ಇಲ್ಲವೆಂದು ಅವನ ವಿಷಯದಲ್ಲಿ ಅವಳ ಅಧಿಕಾರ. ಅದರ ಅತಿಯಾಗಿತ್ತು.

೨

ಹುಡುಗನ ಹೆಸರು ಸೋಮಮಣಿ. ಅವನಿಗೆ ಎರಡು ವರ್ಷ ವಯಸ್ಸಾದಾಗ ಅವರ ತಂದೆಗೆ ಬಹಳ ಕಾಯಿಲೆಯಾಯಿತು. ಅತಿ ಬೇಗನೆ ಬರುವಂತೆ ಜಯಗೋಪಾಲನಿಗೆ ಕಾಗದ ಬರೆಸಿದರು. ಅವನು ಬಹು ಪ್ರಯತ್ನಪಟ್ಟು ರಜ ಪಡೆದು ಬಂದು ಸೇರುವಾಗ ಕಾಳೀಪ್ರಸನ್ನನ ಕೊನೆಗಾಲ ಸಮೀಪಿಸಿತ್ತು.

ಕಾಳೀಪ್ರಸನ್ನನು ಸಾಯುವ ಮುಂಚೆ ಅಪ್ರಾಪ್ತವಯಸ್ಕ ಬಾಲಕನ ಪೋಷಣೆಯ ಹೊಣೆಯನ್ನು ಜಯಗೋಪಾಲನಿಗೆ ವಹಿಸಿ ತನ್ನ ಆಸ್ತಿಯಲ್ಲಿ ನಾಲ್ಕಾಣೆಯ ಭಾಗವನ್ನು ಮಗಳ ಹೆಸರಿಗೆ ಬರೆದಿಟ್ಟನು.

ಆಸ್ತಿಯ ಮೇಲ್ವಿಚಾರಣೆಗಾಗಿ ಜಯಗೋಪಾಲನು ಕೆಲಸ ಬಿಟ್ಟು ಬರಬೇಕಾಯಿತು.

ಬಹುದಿನಗಳ ನಂತರ ಗಂಡಹೆಂಡಿರ ಪುನರ್ಮಿಲನವಾಯಿತು. ಜಡವಸ್ತುವೊಂದು ಮುರಿದು ಬಿದ್ದರೆ ಮತ್ತೆ ಅದರ ಎಳೆ ಎಳೆಯನ್ನು ಮೊದಲಿ

ಮುಖ್ಯವಾಗಿ ರಾತ್ರಿಯ ವೇಳೆ ನೀಲಮಣಿಯ ಅಳುವಿನಿಂದ ಅವಳ ಗಂಡನ ನಿದ್ರೆಗೆ ಭಂಗ ಬರುತ್ತಿತ್ತು. ಇದರಿಂದ ಅವನು ಮಗುವಿನ ಮೇಲೆ ಅತ್ಯಂತ ಹಿಂಸ್ರ ಭಾವನೆಯಿಂದ ಘೃಣಾಪೂರ್ಣ ಚಿತ್ತದೊಡನೆ ಗರ್ಜಿಸುತ್ತಿದ್ದನು. ಶಶಿ ಅಪರಾಧಿನಿಯಂತೆ ಸಂಕೋಚದೊಡನೆ ಅವಸರದಿಂದ ತಕ್ಷಣ ಮಗುವನ್ನು ಎತ್ತಿಕೊಂಡು ದೂರ ಹೋಗಿ ಪೂರ್ಣ ಅನುನಯದ ಸ್ವರದೊಡನೆ 'ನನ್ನ ಚಿನ್ನ, ನನ್ನ ರನ್ನ, ನನ್ನ ಮಾಣಿಕ್ಯ' ಎಂದು ಹೇಳುತ್ತ ಅವನನ್ನು ನಿದ್ರೆ ಹೋಗಿಸಲೆತ್ನಿಸುತ್ತಿದ್ದಳು.

ಹುಡುಗ ಹುಡುಗರಲ್ಲಿ ನಾನಾ ಸಂದರ್ಭಗಳಲ್ಲಿ ವಾದವಿವಾದ ಆಗುವುದು ಸಹಜ. ಹಿಂದೆ ಇಂತಹ ಸ್ಥಿತಿಯಲ್ಲಿ ಶಶಿ ಸ್ವಂತ ಮಗನನ್ನು ಶಿಕ್ಷಿಸಿ ತಮ್ಮನ ಪಕ್ಷ ವಹಿಸುತ್ತಿದ್ದಳು. ಕಾರಣವೇನೆಂದರೆ ಅವನಿಗೆ ತಾಯಿ ಇರಲಿಲ್ಲ. ಈ ವಿಚಾರಕನ ಬದಲಾವಣೆ ಆದಂತೆ ಶಿಕ್ಷೆಯ ವಿಧಾನವೂ ಬದಲಾಯಿಸಿತು. ತಪ್ಪಿಲ್ಲದೆಯೇ ವಿವೇಚನೆಯಿಲ್ಲದೆ ನೀಲಮಣಿಗೆ ಕಠಿಣ ಶಿಕ್ಷೆ ಅನುಭವಿಸಬೇಕಾಗಿತ್ತು. ಈ ಅನ್ಯಾಯ ಶಶಿಯ ಹೃದಯದಲ್ಲಿ ಸದಾ ಬಾಣದಂತೆ ಚುಚ್ಚುತ್ತಿತ್ತು. ಅವಳು ದಂಡನೆಗೆ ಗುರಿಯಾದ ತಮ್ಮನನ್ನು ಕೊಠಡಿಗೆ ಕರೆದುಕೊಂಡು ಹೋಗಿ ಮಿಠಾಯಿ ಕೊಟ್ಟು, ಆಟದ ಸಾಮಾನುಗಳನ್ನು ಕೊಟ್ಟು ಆದರಿಸಿ ಮುದ್ದಿಸಿ ಅವನ ನೊಂದ ಹೃದಯವನ್ನು ಸಾಧ್ಯವಾದ ಮಟ್ಟಿಗೆ ತಣಿಸಲು ಪ್ರಯತ್ನಿಸುತ್ತಿದ್ದಳು.

ಇದರ ಫಲವಾಗಿ ಶಶಿ ನೀಲಮಣಿಯನ್ನು ಪ್ರೀತಿಸಿದಷ್ಟೂ ಜಯಗೋಪಾಲನು ನೀಲಮಣಿಯ ವಿಷಯದಲ್ಲಿ ಬೇಸರಪಡುತ್ತಿದ್ದನು. ಜಯಗೋಪಾಲನು ನೀಲಮಣಿಯ ವಿಷಯದಲ್ಲಿ ಬೇಸರ ತೋರಿದಷ್ಟೂ ಶಶಿ ತನ್ನ ಸ್ನೇಹಸುಧೆಯನ್ನು ಅವನ ಮೇಲೆ ಅಭಿಷೇಕ ಮಾಡುವಳು.

ಜಯಗೋಪಾಲನು ಎಂದೂ ತನ್ನ ಹೆಂಡತಿಯ ವಿಷಯದಲ್ಲಿ ಕಠಿಣವಾಗಿ ನಡೆದುಕೊಳ್ಳುವ ಸ್ವಭಾವದವನಲ್ಲ. ಶಶಿ ನೀರವವಾಗಿ ನಮ್ರಭಾವದಲ್ಲಿ ಪ್ರೀತಿಯೊಡನೆ ತನ್ನ ಗಂಡನ ಸೇವೆ ಮಾಡುತ್ತಿದ್ದಳು. ಈಗ ಕೇವಲ ಈ ನೀಲಮಣಿಯ ಕಾರಣದಿಂದ ಉಭಯತರಲ್ಲಿ ಒಳಗೊಳಗೆ ರಾತ್ರಿ ಹಗಲು ಆಘಾತವಾಗುತ್ತಿತ್ತು.

ಈ ತರದ ನೀರವ ದ್ವಂದ್ವದ ಗುಪ್ತ ಆಘಾತ ಪ್ರತ್ಯಾಘಾತಗಳು ಬಹಿರಂಗ ವಿವಾದಕ್ಕಿಂತ ಅತಿ ಹೆಚ್ಚು ಅಸಹನೀಯವಾದವು.

ನೀಲಮಣಿಯ ಮೈಯಲ್ಲಿ ಎಲ್ಲ ಅಂಗಗಳಿಗಿಂತ ತಲೆಯೇ ಮುಖ್ಯವಾದುದು. ಅವನನ್ನು ನೋಡಿದರೆ ಬ್ರಹ್ಮನು ಒಂದು ತೆಳ್ಳಗಿದ್ದ ಕಡ್ಡಿಯೊಳಗೆ ಊದಿ ಅದರ ಕೊನೆಯಲ್ಲಿ ಒಂದು ದಪ್ಪ ಗುಳ್ಳೆಯನ್ನು ಉಂಟುಮಾಡಿರುವಂತೆ ಅನಿಸುತ್ತಿತ್ತು. ಈ ಹುಡುಗನೂ ಗುಳ್ಳೆಯ ಹಾಗೆಯೇ ಕ್ಷಣಕಾಲ ಬದುಕುವನೆಂದು ಡಾಕ್ಟರುಗಳು ಹಲವು ಸಲ ಅಭಿಪ್ರಾಯಪಟ್ಟಿದ್ದರು. ಬಹುದಿನಗಳ ವರೆಗೆ ಅವನಿಗೆ ಮಾತನಾಡಲೂ ನಡೆಯಲೂ ಬರಲಿಲ್ಲ. ಅವನ ವಿಷಣ್ಣ ಗಂಭೀರ ಮುಖ ನೋಡಿದರೆ ಅವನ ತಾಯಿತಂದೆಗಳು ತಮ್ಮ ಮುಪ್ಪಿನ ಎಲ್ಲ ಚಿಂತೆಗಳ ಹೊರೆಯನ್ನೂ ಈ ಕ್ಷುದ್ರ ಶಿಶುವಿನ ತಲೆಯಮೇಲೆ ಹೇರಿ ಹೋಗಿರುವಂತೆ ಅನಿಸುತ್ತಿತ್ತು. ಅಕ್ಕನ ಆರೈಕೆ ಮತ್ತು ಜಾಗರೂಕತೆಯಿಂದ ನೀಲಮಣಿ ತನ್ನ ವಿಪತ್ಕಾಲವನ್ನು ಕಳೆದು ಆರನೆಯ ವಯಸ್ಸಿನಲ್ಲಿ ಕಾಲಿಟ್ಟನು.

ಕಾರ್ತಿಕ ಮಾಸದಲ್ಲಿ ಭಾಯಿಫೋಂಟಾ*ದ ದಿನ. ಹೊಸ ಅಂಗಿ ವಲ್ಲಿ ಮತ್ತು ಒಂದು ಕೆಂಪು ಅಂಚಿನ ಹೊಸ ಪಂಚೆ ಉಡಿಸಿ ಸಿಂಗರಿಸಿ ನೀಲಮಣಿಯ ಹಣೆಯಲ್ಲಿ ಶಶಿ ಚಂದನವಿಡುತ್ತಿದ್ದಳು. ಈ ಸಮಯದಲ್ಲಿ ಹಿಂದೆ ಹೇಳಿದ ಸ್ಪಷ್ಟಭಾಷಿಣಿ ನೆರೆಯಾಕೆ ತಾರೆ ಅಲ್ಲಿಗೆ ಬಂದು ಮಾತಿನ ನಡುವೆ ಶಶಿಯೊಡನೆ ಜಗಳವಾಡಿದಳು. "ಗುಟ್ಟಾಗಿ ತಮ್ಮನನ್ನು ಹಾಳುಮಾಡುತ್ತ ಹೀಗೆ ಆಡಂಬರದಿಂದ ಅವನ ಹಣೆಗೆ ಗಂಧ ಹಚ್ಚುವುದರಿಂದ ಏನೇನೂ ಪ್ರಯೋಜನವಿಲ್ಲ" ಎಂದು ಅವಳು ಹೇಳಿದಳು.

ಇದನ್ನು ಕೇಳಿ ಶಶಿ ವಿಸ್ಮಯ ಕ್ರೋಧ ಮತ್ತು ವೇದನೆಯಿಂದ ವಜ್ರಾಹತಳಾದಳು. ಕೊನೆಗೆ ತಾರೆ "ಗಂಡಹೆಂಡಿರು ಕಲೆತು ವಯಸ್ಸಾಗದ ನೀಲಮಣಿಯ ಆಸ್ತಿಯನ್ನು ಕಂದಾಯ ಕೊಡದೆ ಹರಾಜು ಮಾಡಿಸಿ ನಿನ್ನ ಗಂಡನ ಚಿಕ್ಕಪ್ಪನ ಮಗನ ಹೆಸರಿಗೆ ಪಟ್ಟೆ ಬದಲಾಯಿಸಿಕೊಂಡು ತಿರಿಗಿ ಬೆಲೆಗೆ ಕೊಂಡಿರುವಿರೆಂದು" ಹೇಳಿದಳು.

ಈ ಮಾತುಗಳನ್ನು ಕೇಳಿ "ಇಷ್ಟು ದೊಡ್ಡ ಸುಳ್ಳು ಹೇಳುವವರ ನಾಲಿಗೆ ಸೇದಿಹೋಗಲಿ" ಎಂದು ಶಶಿ ಶಾಪ ಹಾಕಿದಳು. ಹೀಗೆ ಹೇಳಿ

---

* ಬಂಗಾಳದಲ್ಲಿ ಕಾರ್ತಿಕ ಶುದ್ಧ ದ್ವಿತೀಯೆಯಂದು ಭಾಯಿಫೋಂಟಾ ಅಥವಾ ಭ್ರಾತೃ ದ್ವಿತಿಯೆ ಎಂಬ ಹಬ್ಬ. ಅಂದು ಹೆಂಗಸರು ತಮ್ಮ ಅಣ್ಣತಮ್ಮಂದಿರಿಗೆ ಔತಣ ಕೊಟ್ಟು ಹೊಸ ಬಟ್ಟೆ, ಭಕ್ಷ್ಯ ಭೋಜ್ಯಗಳಿಂದ ಉಪಚರಿಸಿ ಹಣೆಯಲ್ಲಿ 'ಫೋಂಟಾ' (ತಿಲಕ) ಹಚ್ಚುವರು.

ಅಳುತ್ತ ಗಂಡನ ಹತ್ತಿರ ಹೋಗಿ ಜನಗಳು ಆಡುವ ಮಾತನ್ನು ಅವನಿಗೆ ತಿಳಿಸಿದಳು.

ಜಯಗೋಪಾಲನು "ಈ ಕಾಲದಲ್ಲಿ ಯಾರನ್ನೂ ನಂಬಲು ಸಾಧ್ಯವಿಲ್ಲ. ಉಪೇನನು ನನ್ನ ಸ್ವಂತ ಚಿಕ್ಕಪ್ಪನ ಮಗ. ಅವನ ಮೇಲೆ ಆಸ್ತಿಯ ಮೇಲ್ವಿಚಾರಣೆಯ ಭಾರ ವಹಿಸಿ ನಾನು ಸಂಪೂರ್ಣ ನಿಶ್ಚಿಂತನಾಗಿದ್ದೆ. ಅವನು ಯಾವಾಗ ಗುಟ್ಟಾಗಿ ಕಂದಾಯವನ್ನು ಬಾಕಿ ಮಾಡಿ ಹಾಸಿಲ್‌ಪುರ್ ಇಲಾಖೆಯನ್ನು ಸ್ವತಃ ಕೊಂಡುಕೊಂಡನೆಂಬುದು ನಾನು ಅರಿಯಲೂ ಸಾಧ್ಯವಿಲ್ಲವಾಯಿತು" ಎಂದನು.

ಶಶಿ ಆಶ್ಚರ್ಯದೊಡನೆ "ಅವನ ಮೇಲೆ ವ್ಯಾಜ್ಯ ಹೂಡುವುದಿಲ್ಲವೇನು?" ಎಂದು ಕೇಳಿದಳು.

ಜಯಗೋಪಾಲನು "ತಮ್ಮನ ಮೇಲೆ ಹೇಗೆ ವ್ಯಾಜ್ಯ ಹೂಡಲಿ? ಅಲ್ಲದೆ ಹೂಡಿದರೂ ಪ್ರಯೋಜನವಿಲ್ಲ. ಹಣ ನಷ್ಟ ಅಷ್ಟೆ" ಎಂದನು.

ಗಂಡನ ಮಾತುಗಳನ್ನು ನಂಬುವುದು ಶಶಿಯ ಕರ್ತವ್ಯ. ಆದರೆ ಯಾವ ವಿಧದಲ್ಲೂ ಈ ಮಾತುಗಳನ್ನು ನಂಬಲಾರದಾದಳು. ಈ ಪ್ರೇಮ ಭರಿತ ಗಾರ್ಹಸ್ಥ್ಯವು ಇದ್ದಕ್ಕಿದ್ದ ಹಾಗೆ ಅವಳಿಗೆ ಭೀಕರವಾಗಿ ಕಾಣಿಸಿತು. ಯಾವ ಸಂಸಾರವನ್ನು ತನ್ನ ಪರಮ ಆಶ್ರಯವೆಂದು ಎಣಿಸಿದ್ದಳೋ ಅದೊಂದು ಸ್ವಾರ್ಥದ ಉರುಲೆಂದು ಹಠಾತ್ತಾಗಿ ಅವಳಿಗೆ ಅರಿವಾಯಿತು. ಆ ಉರುಲು ಅವರಿಬ್ಬರು ಅಕ್ಕತಮ್ಮಂದಿರನ್ನು ತನ್ನ ಕುಣಿಕೆಯಲ್ಲಿ ಸೇರಿಸಿ ಕೊಂಡಿದೆಯೆಂದು ಅವಳಿಗೆ ತೋರಿತು. ಅವಳು ಒಂಟಿ ಹೆಣ್ಣು. ಅಸಹಾಯ ನೀಲಮಣಿಯನ್ನು ಹೇಗೆ ರಕ್ಷಿಸುವುದು ಎಂಬುದನ್ನು ಯೋಚಿಸುತ್ತ ಅವಳಿಗೆ ಪಾರುಗಾಣಲಿಲ್ಲ. ಚಿಂತಿಸಿದಷ್ಟೂ ಹೆದರಿಕೆ, ಘೃಣ ಮತ್ತು ಬೇಸರಿಕೆ. ವಿಪತ್ತಿನಲ್ಲಿರುವ ಹುಡುಗನ ವಿಷಯದಲ್ಲಿ ಮೇರೆಯಿಲ್ಲದ ಸ್ನೇಹದಿಂದ ಅವಳ ಹೃದಯ ತುಂಬಿತ್ತು. ದಾರಿ ಕಂಡಿದ್ದರೆ ಗವರ್ನರನ ಬಳಿ ಮನವಿ ಮಾಡಿಕೊಂಡು, ಅಷ್ಟೇ ಏಕೆ ಮಹಾರಾಣಿಗೆ ಅರ್ಜಿ ಬರೆದು ತನ್ನ ತಮ್ಮನ ಆಸ್ತಿ ಉಳಿಸಲು ಪ್ರಯತ್ನಿಸುತ್ತಿದ್ದೆನೆಂದು ಅವಳು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದಳು. ಮಹಾರಾಣಿಯು ನೀಲಮಣಿಯ ಏಳುನೂರ ಐವತ್ತೆಂಟು ರೂಪಾಯಿ ವಾರ್ಷಿಕ ಆದಾಯದ ಹಾಸಿಲ್‌ಪುರ ಗ್ರಾಮವನ್ನು ವಿಕ್ರಯವಾಗಲು ಅವಕಾಶ ಕೊಡಳೆಂದು ಶಶಿಯ ಭಾವನೆ.

ಈ ರೀತಿ ಮಹಾರಾಣಿಗೆ ಅರ್ಜಿ ಬರೆದು ತನ್ನ ಗಂಡನ ಚಿಕ್ಕಪ್ಪನ ಮಗನನ್ನು ಸೋಲಿಸಬೇಕೆಂದು ಆಲೋಚಿಸುತ್ತಿರುವಾಗ ಅಕಸ್ಮಾತ್ತಾಗಿ ನೀಲಮಣಿಗೆ ಜ್ವರ ಬಂದು ಗಾಬರಿಯನ್ನುಂಟುಮಾಡುವ ರೀತಿಯಲ್ಲಿ ಮೂರ್ಛೆಯನ್ನು ಹೊಂದಿದಳು.

ಜಯಗೋಪಾಲನು ಪಟ್ಟಣದ ವೈದ್ಯನೊಬ್ಬನನ್ನು ಕರೆದನು. ದಕ್ಷನಾದ ಡಾಕ್ಟರನನ್ನು ಕರೆಯಬೇಕೆಂದು ಶಶಿ ಬಲಾತ್ಕರಿಸಲು “ಯಾಕೆ? ಮೋತೀಲಾಲನೇನು ಕೆಲಸಕ್ಕೆ ಬಾರದವನೋ?” ಎಂದನು.

ಶಶಿ ಆಗ ಅವನ ಕಾಲಿಗೆ ಬಿದ್ದಳು. ಆಣೆ ಇಟ್ಟುಕೊಂಡಳು. ಜಯಗೋಪಾಲನು “ಒಳ್ಳೆಯದು; ಪಟ್ಟಣದಿಂದ ದೊಡ್ಡ ಡಾಕ್ಟರನ್ನು ಕರೆತರಲು ಆಳನ್ನು ಕಳುಹಿಸುವ” ಎಂದನು.

ಶಶಿ ನೀಲಮಣಿಯನ್ನು ತೊಡೆಯಲ್ಲಿಟ್ಟುಕೊಂಡು, ಎದೆಗಪ್ಪಿಕೊಂಡು ಬಿದ್ದಿದ್ದಳು. ನೀಲಮಣಿಯೂ ಅವಳನ್ನು ಒಂದು ಗಳಿಗೆಯೂ ಕಣ್ಮರೆಯಾಗಗೊಡುತ್ತಿರಲಿಲ್ಲ. ಆ ಮೇಲೆ ಎಲ್ಲಾದರೂ ಮೋಸ ಮಾಡಿ ಹೋಗಿಬಿಡುವಳೆಂಬ ಹೆದರಿಕೆಯಿಂದ ಅವಳಿಗೆ ಅಂಟಿಕೊಂಡೇ ಇರುತ್ತಿದ್ದನು. ಅಷ್ಟೇ ಅಲ್ಲ; ನಿದ್ರೆ ಹೋದರೂ ಅವಳ ಸೆರಗು ಹಿಡಿದುಕೊಂಡೇ ಇರುತ್ತಿದ್ದನು

ಹಗಲು ಹೀಗೆ ಕಳೆಯಲು ಸಂಜೆಯ ವೇಳೆಗೆ ಜಯಗೋಪಾಲನು ಬಂದು “ಪಟ್ಟಣದಲ್ಲಿ ಡಾಕ್ಟರ್ ಬಾಬುಗಳು ಸಿಕ್ಕಲಿಲ್ಲ. ಅವರು ದೂರದಲ್ಲಿ ಯಾರೋ ಕಾಯಿಲೆಯವರನ್ನು ನೋಡಲು ಹೋಗಿರುವರು” ಎಂದು ಹೇಳಿದನು. ಅನಂತರ “ಮೊಕದ್ದಮೆಗಾಗಿ ನಾನು ಇಂದೇ ಬೇರೆ ಊರಿಗೆ ಹೋಗಬೇಕಾಗಿದೆ. ಮೋತೀಲಾಲನಿಗೆ ಹೇಳಿಹೋಗುವೆ. ಅವನು ಹೊತ್ತುಹೊತ್ತಿಗೆ ಬಂದು ನೋಡಿಕೊಂಡು ಹೋಗುವನು” ಎಂದನು.

ರಾತ್ರಿಯಲ್ಲಿ ನೀಲಮಣಿ ನಿದ್ರೆಯಲ್ಲಿ ಕನವರಿಸತೊಡಗಿದನು. ಬೆಳಗಾದ ಕೂಡಲೇ ಶಶಿ ಯಾವ ಯೋಚನೆಯನ್ನೂ ಮಾಡದೆ ರೋಗಿಷ್ಟ ತಮ್ಮನನ್ನು ಎತ್ತಿಕೊಂಡು ದೋಣಿ ಹತ್ತಿ ಪಟ್ಟಣವನ್ನು ಸೇರಿ ನೆಟ್ಟಗೆ ಡಾಕ್ಟರರ ಮನೆಗೆ ಹೋದಳು. ಅವರು ಮನೆಯಲ್ಲೇ ಇದ್ದರು. ಎಲ್ಲೂ ಹೋಗಿರಲಿಲ್ಲ. ಸಂಪನ್ನರ ಮನೆಯ ಹೆಣ್ಣುಮಗಳನ್ನು ಕಂಡು ಅವರು ತಕ್ಷಣ ಅವಳಿಗೆ ಒಂದು ಮನೆ ಗೊತ್ತುಮಾಡಿಕೊಟ್ಟು, ಸಹಾಯಕ್ಕೆ ವಯಸ್ಕ ವಿಧವೆಯೊಬ್ಬಳನ್ನು ನೇಮಿಸಿ ಹುಡುಗನಿಗೆ ಚಿಕಿತ್ಸೆ ಮಾಡತೊಡಗಿದರು.

ಮರುದಿನವೇ ಜಯಗೋಪಾಲನು ಬಂದನು. ಕೋಪದಿಂದ ಬೆಂಕಿಯಾಗಿ ತಕ್ಷಣ ತನ್ನೊಡನೆ ಹಿಂತಿರುಗುವಂತೆ ಹೆಂಡತಿಗೆ ಹೇಳಿದನು.

"ನನ್ನನ್ನು ಕತ್ತರಿಸಿ ತುಂಡು ಮಾಡಿದರೂ ನಾನು ಈಗ ಹಿಂತಿರುಗೆನು. ನೀನು ನನ್ನ ನೀಲಮಣಿಯನ್ನು ಕೊಲ್ಲಬಯಸುವೆ. ಅವನಿಗೆ ತಾಯಿಯಿಲ್ಲ, ತಂದೆಯಿಲ್ಲ; ನಾನಲ್ಲದೆ ಅವನಿಗೆ ಮತ್ತಾರೂ ದಿಕ್ಕೇ ಇಲ್ಲ. ನಾನು ಅವನನ್ನು ರಕ್ಷಿಸುವೆನು" ಎಂದು ಅವಳು ಹೇಳಿದಳು.

ಜಯಗೋಪಾಲನು ಕೋಪದಿಂದ "ಹಾಗಾದರೆ ಇಲ್ಲೇ ಇರು ನೀನು. ಇನ್ನು ನನ್ನ ಮನೆಗೆ ಹಿಂತಿರುಗಬೇಡ" ಎಂದನು.

ಶಶಿ ಆಗ ಉದ್ರೇಕಗೊಂಡು "ಮನೆ ನಿನ್ನದೇನು? ನನ್ನ ತಮ್ಮನದಲ್ಲವೇ ಮನೆ" ಎಂದಳು.

"ಇರಲಿ. ಅದು ಮುಂದೆ ತಿಳಿಯುವುದು" ಎಂದು ಜಯಗೋಪಾಲನು ಹೇಳಿದನು.

ಕೇರಿಯ ಜನರು ಈ ಘಟನೆಯಲ್ಲಿ ಕೆಲವು ದಿನ ಸಂಪೂರ್ಣ ಮನಸ್ಸಿಟ್ಟಿರುತ್ತಿದ್ದರು. ನೆರೆಮನೆಯ ತಾರೆ "ಗಂಡನೊಡನೆ ಜಗಳವಾಡಬೇಕಾದರೆ ಮನೆಯಲ್ಲಿದ್ದೇ ಆಡಮ್ಮ. ಮನೆಬಿಟ್ಟು ಹೋಗುವ ಅವಶ್ಯಕತೆಯೇನು? ಏನಾದರೂ ಅವನು ಗಂಡನಲ್ಲವೇ?" ಎಂದಳು.

ಕೈಯಲ್ಲಿದ್ದ ಹಣವನ್ನೆಲ್ಲ ವೆಚ್ಚಮಾಡಿ, ಮೈಮೇಲಿನ ಒಡವೆಗಳನ್ನು ಮಾರಿ ಶಶಿ ತನ್ನ ತಮ್ಮನನ್ನು ಮೃತ್ಯುಮುಖದಿಂದ ಬದುಕಿಸಿಕೊಂಡಳು. ಆ ಸಮಯದಲ್ಲಿ ದ್ವಾರಿಗ್ರಾಮದಲ್ಲಿ ವರುಷಕ್ಕೆ ಒಂದೂವರೆ ಸಾವಿರ ವರಮಾನವಿದ್ದ ಆಸ್ತಿಯನ್ನು ಜಮೀನುದಾರರೊಡನೆ ಒಳಸಂಚು ನಡೆಸಿ ಜಯಗೋಪಾಲನು ತನ್ನ ಹೆಸರಿಗೆ ಬರೆಸಿಕೊಂಡಿರುವನೆಂಬ ಸುದ್ದಿ ಕೇಳಿದಳು. ಈಗ ಆಸ್ತಿಪಾಸ್ತಿಯೆಲ್ಲಾ ಅವನದು. ಅವಳ ತಮ್ಮನದಲ್ಲ.

ಬೇನೆ ಗುಣವಾದನಂತರ ನೀಲಮಣಿಯು "ಅಕ್ಕ, ನಮ್ಮ ಮನೆಗೆ ಹೋಗೋಣ" ಎಂದನು. ಇದನ್ನು ಕೇಳಿ ಅಕ್ಕನು ಅಳತೊಡಗಿದಳು. 'ಇನ್ನು ನಮಗೆ ಮನೆ ಎಲ್ಲಿಯದು?' ಎಂದಳು.

ಆದರೆ ಕೇವಲ ಅಳುವುದರಿಂದ ಪ್ರಯೋಜನವೇನು? ಆ ವೇಳೆಯಲ್ಲಿ ಅಕ್ಕನನ್ನು ಬಿಟ್ಟು ಆ ತಮ್ಮನಿಗೆ ಯಾರೂ ದಿಕ್ಕಿರಲಿಲ್ಲ. ಇದನ್ನು ನೆನೆದು

ಕಣ್ಣೀರು ಒರಸಿಕೊಂಡು ಶಶಿ ಡೆಪ್ಯುಟಿ ಮ್ಯಾಜಿಸ್ಟ್ರೇಟ್ ತಾರಿಣಿಬಾಬುಗಳ ಅಂತಃಪುರಕ್ಕೆ ಹೋಗಿ ಅವರ ಹೆಂಡತಿಯ ಕಾಲಿಗೆ ಬಿದ್ದಳು.

ಡೆಪ್ಯುಟಿ ಬಾಬುಗಳಿಗೆ ಜಯಗೋಪಾಲನ ಪರಿಚಯವಿತ್ತು. ಗೃಹಸ್ಥರ ಹೆಣ್ಣುಮಗಳು ಹೊರಬಿದ್ದು ಆಸ್ತಿಗಾಗಿ ಗಂಡನೊಡನೆ ವ್ಯಾಜ್ಯಹೂಡುವ ನಡವಳಿಕೆ ಅವರಿಗೆ ಬೇಸರಿಕೆಯುಂಟುಮಾಡಿತು. ಅವಳಿಗೆ ಸಮಾಧಾನ ಹೇಳಿ ಕೂರಿಸಿ ತಕ್ಷಣ ಜಯಗೋಪಾಲನಿಗೆ ಕಾಗದ ಕಳುಹಿಸಿದರು. ಜಯಗೋಪಾಲನು ತಮ್ಮನೊಡನೆ ಬಂದು ಹೆಂಡತಿಯನ್ನು ಬಲಾತ್ಕಾರವಾಗಿ ದೋಣಿ ಹತ್ತಿಸಿ ಮನೆಗೆ ಕರೆದುಕೊಂಡು ಹೋದನು.

ಗಂಡಹೆಂಡಿರಲ್ಲಿ ಎರಡನೆಯ ವಿಚ್ಛೇದದ ನಂತರ ಮತ್ತೆ ಹೀಗೆ ಎರಡನೆಯ ಸಲ ಮಿಲನವಾಯಿತು. ಬ್ರಹ್ಮ ಹಾಕಿದ ಗಂಟು.

ಬಹು ದಿನಗಳ ನಂತರ ಮನೆಗೆ ಹಿಂತಿರುಗಿ ಹಳೆಯ ಜೊತೆಗಾರರೊಡನೆ ಸೇರಿ ನೀಲಮಣಿ ಅತ್ಯಾನಂದದಿಂದ ತಿರುಗತೊಡಗಿದನು. ಅವನ ಆ ನಿಶ್ಚಿಂತ ಆನಂದವನ್ನು ನೋಡಿ ಒಳಗೊಳಗೆ ಶಶಿಯ ಎದೆಯೊಡೆಯಿತು.

೪

ಶೀತಕಾಲದಲ್ಲಿ ಮ್ಯಾಜಿಸ್ಟ್ರೇಟ್ ಸಾಹೇಬರು ಜಿಲ್ಲೆಯಲ್ಲಿ ಸಂಚಾರ ಮಾಡುತ್ತ ಬೇಟೆಯ ಆಸೆಯಿಂದ ಹಳ್ಳಿಯ ಬಳಿ ಗುಡಾರ ಹಾಕಿದ್ದರು. ಹಳ್ಳಿಯ ದಾರಿಯಲ್ಲಿ ಸಾಹೇಬರಿಗೆ ನೀಲಮಣಿಯ ಬೇಟಿಯಾಯಿತು. ಇತರ ಹುಡುಗರು ಅವರನ್ನು ಕಂಡು ಚಾಣಿಕ್ಯನ ಶ್ಲೋಕವನ್ನು ಸ್ವಲ್ಪ ಮಾರ್ಪಡಿಸಿ ನಖಿ, ದಂತಿ, ಶೃಂಗಿ ಮೊದಲಾದವುಗಳೊಡನೆ ಸಾಹೇಬರನ್ನೂ ಸೇರಿಸಿ ಸಾಕಷ್ಟು ದೂರದಲ್ಲೇ ಸರಿದಿದ್ದರು. ಆದರೆ ಗಂಭೀರ ಸ್ವಭಾವದ ನೀಲಮಣಿ ನಿಶ್ಚಲ ಕುತೂಹಲದೊಡನೆ ಪ್ರಶಾಂತಭಾವದಿಂದ ಸಾಹೇಬರನ್ನು ನೋಡುತ್ತ ನಿಂತಿದ್ದನು.

ಸಾಹೇಬರು ಕುತೂಹಲದಿಂದ ಹತ್ತಿರ ಬಂದು ಅವನನ್ನು "ನೀನು ಶಾಲೆಯಲ್ಲಿ ಓದುತ್ತೀಯೋ" ಎಂದು ಕೇಳಿದರು. ಹುಡುಗನು ನೀರವವಾಗಿ ತಲೆ ಅಲ್ಲಾಡಿಸಿ 'ಹೌದು' ಎಂದು ಸೂಚಿಸಿದನು. 'ನೀನು ಯಾವ ಪುಸ್ತಕ ಓದಿರುವೆ?' ಎಂದು ಸಾಹೇಬರು ಪ್ರಶ್ನಿಸಿದರು. ನೀಲಮಣಿ 'ಪುಸ್ತಕ' ಎಂಬ ಶಬ್ದದ ಅರ್ಥ ತಿಳಿಯದೆ ಸ್ತಬ್ಧನಾಗಿ ನಿಂತು ಮ್ಯಾಜಿಸ್ಟ್ರೇಟರ ಮುಖ ನೋಡುತ್ತಿದ್ದನು.

ಮ್ಯಾಜಿಸ್ಟ್ರೇಟರೊಡನೆ ಪರಿಚಯವಾದ ಈ ಪ್ರಸಂಗವನ್ನು ನೀಲಮಣಿ ಅತ್ಯಂತ ಉತ್ಸಾಹದಿಂದ ತನ್ನ ಅಕ್ಕನ ಹತ್ತಿರ ವರ್ಣಿಸಿದನು.

ಮಧ್ಯಾಹ್ನ ಅಂಗರೇಖು ಪಾಯಿಜಾಮು, ಪಗಡಿಗಳನ್ನು ಹಾಕಿಕೊಂಡು ಜಯಗೋಪಾಲನು ಮ್ಯಾಜಿಸ್ಟ್ರೇಟರಿಗೆ ಸಲಾಮು ಮಾಡಲು ಹೋದನು. ವಾದಿ, ಪ್ರತಿವಾದಿಗಳು, ಡಲಾಯಿತರು, ಕಾನ್‌ಸ್ಟೇಬಲುಗಳು ನಾಲ್ಕು ದಿಕ್ಕಿನಲ್ಲೂ ನೆರೆದಿದ್ದರು. ಸಾಹೇಬರು ಸೆಕೆಯ ಹೆದರಿಕೆಯಿಂದ ಗುಡಾರದ ಹೊರಗಡೆ ಮರದ ನೆರಳಲ್ಲಿ ಕ್ಯಾಂಪ್ ಟೇಬಲ್ ಹಾಕಿ ಕುಳಿತಿದ್ದರು. ಜಯಗೋಪಾಲನನ್ನು ಕುರ್ಚಿಯಲ್ಲಿ ಕೂರಿಸಿ ಸ್ಥಳೀಯ ವರ್ತಮಾನಗಳನ್ನು ವಿಚಾರಿಸುತ್ತಿದ್ದರು. ಜಯಗೋಪಾಲನು ತನ್ನ ಗ್ರಾಮದ ಜನಸಾಮಾನ್ಯರ ಇದಿರಿನಲ್ಲಿ ಈ ಗೌರವದ ಆಸನವನ್ನು ಗಳಿಸಿ ಮನದಲ್ಲಿ ಉಬ್ಬಿ "ಈ ಸಮಯದಲ್ಲಿ ಚಕ್ರವರ್ತಿಯವರಾಗಲಿ ನಂದಿಯವರಾಗಲಿ ಬಂದು ನೋಡಿದರೆ ಉತ್ತಮ" ಎಂದು ಮನದಲ್ಲಿ ಅಂದುಕೊಳ್ಳುತ್ತಿದ್ದನು.

ಇಂಥ ಸಮಯದಲ್ಲಿ ನೀಲಮಣಿಯನ್ನು ಸಂಗಡ ಕರೆದುಕೊಂಡು ಮೇಲುಹೊದಿಕೆಯಿಂದ ಮೈ ಮುಚ್ಚಿಕೊಂಡು ಹೆಣ್ಣೊಬ್ಬಳು ನೆಟ್ಟಗೆ ಮ್ಯಾಜಿಸ್ಟ್ರೇಟರ ಇದಿರಿನಲ್ಲಿ ಬಂದು ನಿಂತಳು. "ಸಾಹೇಬರೇ! ನಿಮ್ಮ ಕೈಯಲ್ಲಿ ಈ ಅನಾಥ ತಮ್ಮನನ್ನು ಸಮರ್ಪಿಸಿರುವೆ. ನೀವು ಇವನನ್ನು ರಕ್ಷಿಸಬೇಕು" ಎಂದಳು.

ಸಾಹೇಬರು ತಮ್ಮ ಪೂರ್ವಪರಿಚಿತ ದಪ್ಪ ತಲೆಯ ಗಂಭೀರ ಪ್ರಕೃತಿಯ ಹುಡುಗನನ್ನು ಕಂಡು ಆಕೆಯು ಗೃಹಸ್ಥರ ಮನೆಯ ಹೆಣ್ಣೆಂದು ತೀರ್ಮಾನಿಸಿ ತಕ್ಷಣ ಎದ್ದು ನಿಂತು "ನೀವು ಗುಡಾರದೊಳಕ್ಕೆ ಹೋಗಿರಿ" ಎಂದರು.

ಶಶಿಯು "ನಾನು ಹೇಳಬೇಕೆಂದಿರುವುದನ್ನು ಇಲ್ಲಿಯೇ ಹೇಳುವೆ" ಎಂದಳು.

ಜಯಗೋಪಾಲನು ವಿವರ್ಣ ಮುಖದೊಡನೆ ಚಟಪಟಿಸತೊಡಗಿದನು. ಗ್ರಾಮದ ಕುತೂಹಲಿಗಳಾದ ಜನರು ಅತಿ ಸ್ವಾರಸ್ಯಪಟ್ಟುಕೊಂಡು ನಾಲ್ಕು ಕಡೆಯೂ ಮುತ್ತತೊಡಗಿದರು ಸಾಹೇಬರು ಬೆತ್ತ ಎತ್ತಿದ ಮಾತ್ರಕ್ಕೆ ಎಲ್ಲರೂ ದೂರ ಓಡಿದರು.

ಆಗ ಶಶಿ ತನ್ನ ತಮ್ಮನ ಕೈ ಹಿಡಿದುಕೊಂಡು, ತಾಯಿತಂದೆಗಳಿಲ್ಲದ ಆ ಹುಡುಗನ ಕತೆಯೆಲ್ಲವನ್ನೂ ಆಮೂಲಾಗ್ರವಾಗಿ ಹೇಳತೊಡಗಿದಳು.

ಜಯಗೋಪಾಲನು ನಡುನಡುವೆ ಅಡ್ಡಿ ಮಾಡಲೆತ್ನಿಸಲು ಮ್ಯಾಜಿಸ್ಟ್ರೇಟರು ರಕ್ತವರ್ಣ ಮುಖದೊಡನೆ ಗರ್ಜಿಸಿ "ಬಾಯಿ ಮುಚ್ಚು" ಎಂದರು. ಕುರ್ಚಿಯಿಂದ ಎದ್ದು ಇದಿರಿನಲ್ಲಿ ಬಂದು ನಿಲ್ಲುವಂತೆ ಬೆತ್ತದ ಕೊನೆಯಿಂದ ಸೂಚಿಸಿದರು.

ಜಯಗೋಪಾಲನು ಮನಸ್ಸಿನಲ್ಲೇ ಶಶಿಯನ್ನು ಬೈಯುತ್ತ ಸುಮ್ಮನೆ ನಿಂತಿದ್ದನು. ನೀಲಮಣಿಯು ಅಕ್ಕನಿಗೆ ಅತಿ ಹತ್ತಿರ ಸರಿದು ಮಾತಿಲ್ಲದೆ ನಿಂತುಕೇಳುತ್ತಿದ್ದನು.

ಶಶಿಯ ಹೇಳಿಕೆ ಮುಗಿಯಲು ಮ್ಯಾಜಿಸ್ಟ್ರೇಟರು ಜಯಗೋಪಾಲನಿಗೆ ಕೆಲವು ಪ್ರಶ್ನೆಗಳನ್ನು ಹಾಕಿದರು. ಅವುಗಳ ಉತ್ತರ ಕೇಳಿ ಬಲು ಹೊತ್ತು ಮೌನವಾಗಿದ್ದು ಆನಂತರ ಶಶಿಯನ್ನು ಸಂಬೋಧಿಸಿ "ಮಗೂ, ಈ ವ್ಯಾಜ್ಯ ನನ್ನ ಬಳಿ ಬರತಕ್ಕದ್ದಲ್ಲ. ಆದರೂ ನೀನು ನಿಶ್ಚಿಂತಳಾಗಿರು. ಈ ವಿಷಯವಾಗಿ ಮಾಡಬೇಕಾದುದನ್ನು ನಾನು ಮಾಡುವೆನು. ನೀನು ನಿನ್ನ ತಮ್ಮನನ್ನು ಕರೆದುಕೊಂಡು ಮನೆಗೆ ಹಿಂತಿರುಗಬಲ್ಲೆಯಾ?" ಎಂದರು.

ಶಶಿಯು "ಸಾಹೇಬರೇ! ಎಷ್ಟು ದಿನ ಸ್ವಂತ ಮನೆ ಆ ಹುಡುಗನಿಗೆ ಹಿಂದಕ್ಕೆ ಸಿಕ್ಕದೋ ಅಲ್ಲಿಯ ವರೆಗೆ ನನ್ನ ತಮ್ಮನನ್ನು ಮನೆಗೆ ಕರೆದುಕೊಂಡು ಹೋಗಲು ನನಗೆ ಧೈರ್ಯವಾಗದು. ಇನ್ನು ನೀಲಮಣಿಯನ್ನು ನೀವು ನಿಮ್ಮ ಹತ್ತಿರ ಇಟ್ಟುಕೊಳ್ಳದಿದ್ದರೆ ಅವನನ್ನು ರಕ್ಷಿಸುವವರೇ ಇಲ್ಲ" ಎಂದಳು.

"ನೀನೆಲ್ಲಿಗೆ ಹೋಗುವೆ?" ಎಂದು ಸಾಹೇಬರು ಕೇಳಿದರು.

ಶಶಿಯು "ನಾನು ನನ್ನ ಗಂಡನ ಮನೆಗೆ ಹೋಗುವೆ. ನನ್ನ ವಿಷಯದಲ್ಲಿ ಯಾವ ಯೋಚನೆಯೂ ಇಲ್ಲ" ಎಂದಳು.

ಸಾಹೇಬರು ನಸುನಕ್ಕು ಬೇರೆ ದಾರಿಯಿಲ್ಲದೆ ಕೊರಳಲ್ಲಿ ತಾಯಿತ ಕಟ್ಟಿಕೊಂಡಿರುವ ಕೃಶಕಾಯ ಶ್ಯಾಮವರ್ಣ ಗಂಭೀರ ಪ್ರಶಾಂತ ಮೃದು ಸ್ವಭಾವದ ಬಂಗಾಲೀ ಹುಡುಗನನ್ನು ಸಂಗಡ ಕರೆದುಕೊಂಡು ಹೋಗಲು ಒಪ್ಪಿದರು.

ಆಗ ಶಶಿಯು ಬೀಳ್ಕೊಡುವ ವೇಳೆಯಲ್ಲಿ ಬಾಲಕನು ಅವಳ ಸೆರಗನ್ನು ಬಲವಾಗಿ ಹಿಡಿದುಕೊಂಡನು. ಸಾಹೇಬರು "ಅಪ್ಪಾ- ನೀನು ಹೆದರಬೇಡ. ಇಲ್ಲಿ ಬಾ" ಎಂದರು.

ಮೇಲು ಹೊದಿಕೆಯೊಳಗಿನಿಂದ ಎಡೆಬಿಡದೆ ಕಣ್ಣೀರು ಸುರಿಸುತ್ತ ಶಶಿಯು "ನನ್ನ ಕಂದ– ಹೋಗು ಮಗು, ಮತ್ತೆ ನಿಮ್ಮ ಅಕ್ಕನನ್ನು ನೋಡುವೆ" ಎಂದಳು. ಹೀಗೆ ಹೇಳಿ ಅವನನ್ನು ಆಲಂಗಿಸಿ ಅವನ ತಲೆ ಬೆನ್ನುಗಳನ್ನು ಸವರಿ ಹೇಗೊ ತನ್ನ ಸೆರಗು ಬಿಡಿಸಿಕೊಂಡು ವೇಗವಾಗಿ ಹೊರಟು ಹೋದಳು. ಸಾಹೇಬರು ನೀಲಮಣಿಯನ್ನು ಬಲಗೈಯಿಂದ ತಬ್ಬಿ ಹಿಡಿದು ಕೊಂಡರು. ಅವನು "ಅಕ್ಕಾ! ಅಕ್ಕಾ" ಎಂದು ಉಚ್ಚಸ್ವರದಿಂದ ಕೂಗಿ ಅಳತೊಡಗಿದನು. ಶಶಿ ಒಮ್ಮೆ ಹಿಂತಿರುಗಿ ನೋಡಿ ದೂರದಿಂದ ಕೈನೀಡಿ ಅವನನ್ನು ನೀರವವಾಗಿ ಸಮಾಧಾನ ಮಾಡಿ ವಿದೀರ್ಣ ಹೃದಯ ದೊಡನೆ ಕಣ್ಮರೆಯಾದಳು.

ಪುನಃ ಹಳೆಯ ಕಾಲದ ಚಿರಪರಿಚಿತ ಪ್ರಾಚೀನ ಗೃಹದಲ್ಲಿ ಗಂಡ ಹೆಂಡಿರ ಮಿಲನ ಸಂಭವಿಸಿತು. ಬ್ರಹ್ಮ ಹಾಕಿದ ಗಂಟಲ್ಲವೇ? ಆದರೆ ಈ ಮಿಲನ ಹೆಚ್ಚುದಿನ ಶಾಶ್ವತವಾಗಿರಲಿಲ್ಲ. ಯಾಕೆಂದರೆ ಕೆಲವು ದಿನಗಳಲ್ಲೇ ಒಂದು ದಿನ ಬೆಳಿಗ್ಗೆ ಕಾಲರಾವ್ಯಾಧಿಯಿಂದ ಶಶಿಯು ಹಿಂದಿನ ರಾತ್ರಿ ಮೃತ ಳಾದಳೆಂದೂ ರಾತ್ರಿಯಲ್ಲೇ ಅವಳ ದಹನ ಸಂಚಯನಗಳು ನಡೆದುವೆಂದೂ ಗ್ರಾಮದನರು ಸುದ್ದಿ ಕೇಳಿದರು.

ಈ ವಿಷಯವಾಗಿ ಯಾರೂ ಪಟ್ ಪಿಟ್ ಎನ್ನಲಿಲ್ಲ. ನೆರೆಮನೆಯ ಆ ತಾರೆ ಮಾತ್ರ ಮಧ್ಯೆ ಮಧ್ಯೆ ಗರ್ಜಿಸಲೆತ್ನಿಸುತ್ತಿದ್ದಳು. ಎಲ್ಲರೂ ಷ್- ಷ್- ಎಂದು ಅವಳ ಬಾಯಿ ಮುಚ್ಚಿ ಬಿಡುತ್ತಿದ್ದರು.

ಬೀಳ್ಕೊಡುವಾಗ ಶಶಿಯು ಪುನಃ ನೋಡುವೆನೆಂದು ತಮ್ಮನಿಗೆ ಮಾತು ಕೊಟ್ಟಿದ್ದಳು. ಅದು ಎಲ್ಲಿ ನಡೆಯಿತೆಂಬುದು ನನಗೆ ಗೊತ್ತಿಲ್ಲ.

---

# ಇಬ್ಬರು ಸೋದರಿಯರು

## ಶರ್ಮಿಳಾ

ಸ್ತ್ರೀಯರಲ್ಲಿ ಎರಡು ಜಾತಿ ಇದೆಯೆಂದು ಯಾರೋ ಒಬ್ಬ ಪಂಡಿತರಲ್ಲಿ ಕೇಳಿದ್ದೆ. ಒಂದು ಜಾತಿ, ಪ್ರಧಾನವಾಗಿ ತಾಯಿಯರು. ಮತ್ತೊಂದು ಪ್ರಿಯೆಯರು. ಋತುಗಳೊಡನೆ ಹೋಲಿಸುವುದಾದರೆ ತಾಯಿ ವರ್ಷಋತು.

ಜಲದಾನ ಮಾಡುವಳು, ಫಲದಾನ ಮಾಡುವಳು, ತಾಪ ನಿವಾರಿಸುವಳು, ಊರ್ಧ್ವಲೋಕದಿಂದ ತನ್ನನ್ನು ಪ್ರವಹಿಸುವಳು, ಶುಷ್ಕತೆಯನ್ನು ದೂರ ಗೊಳಿಸುವಳು, ಅಭಾವವನ್ನು ಹೋಗಲಾಡಿಸುವಳು.

ಮತ್ತೆ ಪ್ರಿಯೆ ವಸಂತಋತುವಿಗೆ ಸಮ. ಅವಳ ರಹಸ್ಯ ಗಭೀರ, ಅವಳ ಮಾಯಾಮಂತ್ರ ಮಧುರ. ಅವಳ ಚಾಂಚಲ್ಯ ರಕ್ತದಲ್ಲಿ ತರಂಗವ ನ್ನೆಬ್ಬಿಸಿ ಚಿತ್ತದ ಅಂತರಾಳವನ್ನು ಸೋಕಿ, ಝುಂಕಾರವನ್ನು ನಿರೀಕ್ಷಿಸುತ್ತ ಅಲ್ಲಿ ನೀರವವಾಗಿರುವ ನಿಭೃತವಾದೊಂದು ತಂತಿಯನ್ನು ಮೀಟುವುದು. ಆಗ ಹೊರಟ ಝೇಂಕಾರ ದೇಹವಾದ್ಯಂತವೂ ಧ್ವನಿಸುವುದು.

ಶಶಾಂಕನ ಹೆಂಡತಿ ಶರ್ಮಿಳೆ ತಾಯಂದಿರ ಗುಂಪಿನವಳು.

ಶಾಂತವಾದ ದೊಡ್ಡ ದೊಡ್ಡ ಕಣ್ಣುಗಳು. ಧೀರಗಭೀರ ದೃಷ್ಟಿ. ಜಲ ಭರಿತವಾದ ನವಮೇಘದಂತೆ ಸ್ನಿಗ್ಧ ಶ್ಯಾಮಲ ನಧರ ದೇಹ; ಬೈತಲೆಯಲ್ಲಿ ಸಿಂಧೂರದ ಅರುಣ ರೇಖೆ; ಸೀರೆಯ ಕರಿಯ ಅಂಚು ಪ್ರಶಸ್ತವಾದುದು, ಎರಡು ಕೈಗಳಲ್ಲೂ ಮಕರ ಮುಖದ ದಪ್ಪವಾದೆರಡು ಬಳೆಗಳು. ಆ ಭೂಷಣ ಗಳ ಭಾಷೆ ಅಲಂಕಾರದ ಭಾಷೆ ಅಲ್ಲ; ಶುಭಸಾಧನೆಯ ಭಾಷೆ.

ಗಂಡನ ಬಾಳುವೆಯಲ್ಲಿ ಅವಳ ಅಧಿಕಾರ ಶಿಥಿಲವಾದ ಒಂದು ಮೂಲೆಯೂ ಇರಲಿಲ್ಲ. ಹೆಂಡತಿಯ ಅತಿಲಾಲನೆಯಿಂದ ಗಂಡನ ಮನಸ್ಸು ಹತೋಟಿಯಿಲ್ಲದುದಾಗಿತ್ತು. ಸಾಮಾನ್ಯ ದುರ್ಯೋಗದಿಂದ ಫೌಂಟನ್ ಪೆನ್ನು ಮೇಜಿನ ಯಾವುದೋ ಮರೆಯಾದ ಭಾಗದಲ್ಲಿ ಥಳಿಗೆ ಹೊತ್ತು ಅಗೋಚರವಾದರೆ ಅದನ್ನು ಹುಡುಕಿಕೊಡುವ ಹೊಣೆ ಹೆಂಡತಿಯದು. ಸ್ನಾನಕ್ಕೆ ಹೋಗುವುದಕ್ಕೆ ಮುಂಚೆ ಕೈಗಡಿಯಾರ ಎಲ್ಲಿಟ್ಟಿರುವೆನೆಂಬುದು ಶಶಾಂಕನಿಗೆ ನೆನಪಾಗುತ್ತಿರಲಿಲ್ಲ. ಹೆಂಡತಿಯ ಕಣ್ಣಿಗೆ ಅದು ಸುಲಭವಾಗಿ ಗೋಚರಿಸುವುದು. ಬೇರೆಬೇರೆ ಬಣ್ಣದ ಎರಡು ಜೊತೆ ಕಾಲುಚೀಲಗಳಲ್ಲಿ ಒಂದೊಂದನ್ನು ಒಂದೊಂದು ಕಾಲಿಗೆ ತೊಟ್ಟು ಹೊರಗೆ ಹೊರಡಲು ಸಿದ್ಧವಾಗಿರುವಾಗ ಅವನ ಹೆಂಡತಿ ಬಂದು ಅವನ ತಪ್ಪನ್ನು ತಿದ್ದುವಳು. ಬಂಗಾಳೀ ತಿಂಗಳೊಡನೆ ಇಂಗ್ಲೀಷ್ ತಿಂಗಳ ತಾರೀಖು ಬೆರೆಸಿ ಸ್ನೇಹಿತರಿಗೆ ಔತಣ ಕೊಡುವನು. ಆ ಮೇಲೆ ಅಕಾಲದಲ್ಲಿ ಅಪ್ರತ್ಯಾಶಿತವಾಗಿ ಅತಿಥಿ-ಸಮಾಗಮದ ಆಕಸ್ಮಿಕ ಹೊರೆ ಹೆಂಡತಿಯ ಮೇಲೆ ಬೀಳುತ್ತಿತ್ತು. ದೈನಿಕ ಜೀವನದಲ್ಲಿ ಎಲ್ಲಿ ಯಾವ ತಪ್ಪು ನಡೆದರೂ ಅದು ಹೆಂಡತಿಯ ಕೈಯಿಂದ

ಸರಿಹೋಗುವುದೆಂದು ಶಶಾಂಕನ ದೃಢವಿಶ್ವಾಸ. ಆದ್ದರಿಂದ ತಪ್ಪು ಮಾಡುವುದೇ ಅವನ ಸ್ವಭಾವವಾಗಿಹೋಗಿತ್ತು. ಹೆಂಡತಿ ಸ್ನೇಹಬೆರೆತ ತಿರಸ್ಕಾರದೊಡನೆ "ಇನ್ನು ನನ್ನಿಂದ ಸಾಧ್ಯವಿಲ್ಲ ನಿಮಗೇನು ಯಾವುದರಿಂದಲೂ ತಿಳಿವಳಿಕೆ ಬರುವುದೇ ಇಲ್ಲವೇನು?" ಎನ್ನುವಳು. ಅವನಿಗೆ ತಿಳಿವಳಿಕೆಯೇನಾದರೂ ಬಂದುದಾದರೆ ಶರ್ಮಿಳೆಯ ದಿನಗಳು ಬೇಸಾಯವಿಲ್ಲದ ಪೈರಿನಂತಾಗುತ್ತಿತ್ತು

ಶಶಾಂಕನು ಸ್ನೇಹಿತರ ಮನೆಗೆ ಊಟಕ್ಕೆ ಹೋಗಿರುತ್ತಿದ್ದನು. ರಾತ್ರಿ ಹನ್ನೊಂದು ಹೊಡೆಯಿತು ಅಥವಾ ಮಧ್ಯಾಹ್ನ ಮೂರನೆಯ ಝಾವವಾಯಿತು. ಬ್ರಿಡ್ಜ್ † ಆಟ ಭರದಿಂದ ಸಾಗುತ್ತಿದೆ. ಅಕಸ್ಮಾತ್ತಾಗಿ ಸ್ನೇಹಿತರು ನಗತೊಡಗುವರು. "ಓಹೋ ನಿನ್ನ ಸಮನ್ ಜಾರಿಯ ಪ್ಯಾದೆ ಹಾಜರಾದ. ನಿನ್ನ ಕಾಲ ಸಮೀಪಿಸಿತು" ಎನ್ನುವರು.

ಆ ಚಿರಪರಿಚಿತ ಆಳು ಮಹೇಶ. ನರೆತ ಗಡ್ಡ. ಕಪ್ಪಾದ ತಲೆಗೂದಲು. ಮೈಯಲ್ಲಿ ಕಸೆ ಅಂಗಿ, ಹೆಗಲ ಮೇಲೆ ಬಣ್ಣದ ವಸ್ತ್ರ. ಕೈಕುಳಲ್ಲಿ ಬಿದಿರಿನ ದೊಣ್ಣೆ. "ಅಮ್ಮಾವರು ಯಜಮಾನರು ಇಲ್ಲಿದ್ದಾರೆಯೋ ತಿಳಿದು ಬಾ ಎಂದರು" ಎನ್ನುವನು. ಅಮ್ಮಾವರಿಗೆ ಹೆದರಿಕೆ - ಹಿಂತಿರುಗುವಾಗ ದಾರಿಯಲ್ಲಿ ಏನಾದರೂ ಅಪಾಯ ಸಂಭವಿಸಿದರೆ? ಜೊತೆಯಲ್ಲಿ ಒಂದು ಲಾಂದ್ರವನ್ನೂ ಕಳುಹಿಸಿರುವಳು.

ಶಶಾಂಕನು ಬೇಸರಗೊಂಡು ಎಲೆ ಎಸೆದು ಎದ್ದು ನಿಲ್ಲುವನು. ಸ್ನೇಹಿತರು 'ಅಯ್ಯೋ ಪಾಪ! ದಿಕ್ಕಿಲ್ಲದ ಒಂಟಿ ಗಂಡಸು!' ಎನ್ನುವರು. ಮನೆಗೆ ಹಿಂತಿರುಗಿದಾಗ ಶಶಾಂಕ ಹೆಂಡತಿಯೊಡನೆ ಮಾತಾಡುವವನಲ್ಲ. ಅದು ಸ್ನಿಗ್ಧ ಭಾಷೆಯಲ್ಲಾಗಲೀ ವಾಕ್ಕಭಂಗಿಯಲ್ಲಾಗಲೀ ಇರುತ್ತಿರಲಿಲ್ಲ. ಶರ್ಮಿಳೆ ಪಿಟ್ ಎನ್ನದೆ ಭರ್ತ್ಸನೆಯೆಲ್ಲವನ್ನೂ ಸಹಿಸಿಕೊಳ್ಳುವಳು. ಮಾಡುವುದೇನು? ವಿಧಿಯಿಲ್ಲ. ತಾನಿಲ್ಲದಾಗ ಅದೆಷ್ಟು ಆಪತ್ತುಗಳು ಗಂಡನನ್ನು ಮುತ್ತಲು ಕಾದಿವೆಯೆಂಬ ಅಂಜಿಕೆಯನ್ನು ಅವಳು ಮನಸ್ಸಿನಿಂದ ದೂರಗೊಳಿಸುವುದು ಸಾಧ್ಯವೇ ಇರಲಿಲ್ಲ.

ಹೊರಗಿನ ಜನ ಬಂದಿರುವರು. ಪ್ರಾಯಶಃ ಕೆಲಸದ ವಿಷಯ ಮಾತುಕತೆ ನಡೆಯುತ್ತಿದೆ. ಗಳಿಗೆ ಗಳಿಗೆಗೆ ಅಂತಃಪುರದಿಂದ ಸಣ್ಣ ಸಣ್ಣ ತುಂಡು ಕಾಗದಗಳು ಬರುವವು. "ನೆನಪಿದೆಯೋ? ನಿನ್ನೆ ನಿಮಗೆ ಆರೋಗ್ಯ

† ಬ್ರಿಡ್ಜ್—ಒಂದುಬಗೆಯ ಇಸ್ಪೀಟ್ ಆಟ.

ಸರಿಯಿರಲಿಲ್ಲ. ಇವತ್ತು ಹೊತ್ತಿಗೆ ಮುಂಚೆ ಊಟಕ್ಕೆ ಬರುವುದು" ಎಂದು ಇರುತ್ತಿತ್ತು. ಶಶಾಂಕ ಕೋಪಿಸಿಕೊಳ್ಳುವನು. ಮತ್ತೆ ಸೋಲನ್ನೂ ಒಪ್ಪಿ ಕೊಳ್ಳುವನು. ಬಹುಸಂಕಟದಿಂದ ಶಶಾಂಕನೊಮ್ಮೆ ಹೆಂಡತಿಯೊಡನೆ "ನಿನ್ನ ದಮ್ಮಯ್ಯ, ಚಕ್ರವರ್ತಿಯುವರ ಗೃಹಿಣಿಯಂತೆ ಯಾವುದಾದರೊಂದು ಪೂಜೆ ಪುನಸ್ಕಾರ ಆರಂಭಿಸು. ನಿನ್ನ ಶ್ರದ್ಧೆ ಅಷ್ಟನ್ನೂ ನನ್ನೊಬ್ಬನ ಮೇಲೆ ಪ್ರಯೋಗಿಸಿದ್ದಾದರೆ ಅಳತೆ ಮೀರುತ್ತೆ. ದೇವತೆಯೊಡನೆ ಅದನ್ನು ಪಾಲು ಮಾಡಿಕೊಂಡದ್ದಾದರೆ ಸುಲಭವಾಗುತ್ತೆ. ಶ್ರದ್ಧೆ ತೋರುವುದರಲ್ಲಿ ಎಷ್ಟೇ ಅತಿರೇಕಕ್ಕೆ ಹೋದರೂ ದೇವತೆ ಆಕ್ಷೇಪಣೆ ಮಾಡದು, ಆದರೆ ಮನುಷ್ಯ ಅತಿ ದುರ್ಬಲನಾದವನು" ಎಂದನು.

ಶರ್ಮಿಳೆಯು "ಸರಿ ಸರಿ, ಒಂದು ಸಲ ಕಕ್ಕನ ಸಂಗಡ ಹರಿದ್ವಾರಕ್ಕೆ ಹೋಗಿದ್ದಿರಲ್ಲಾ ಅದು ನಿಮಗೆ ನೆನಪಿದೆಯೋ?" ಎಂದಳು.

ಪರಿಸ್ಥಿತಿ ಅತ್ಯಂತ ಶೋಚನೀಯವಾಗಿತ್ತೆಂಬ ಸಂಗತಿಯನ್ನು ಶಶಾಂಕನೇ ಒಮ್ಮೆ ಬೇಕಾದಷ್ಟು ಅಲಂಕಾರ ಮಾಡಿ ಹೆಂಡತಿಗೆ ತಿಳಿಸಿ ದ್ದನು. ಈ ಅತ್ಯುಕ್ತಿಯಿಂದ ಶರ್ಮಿಳೆಗೆ ಎಷ್ಟು ಅನುತಾಪವಾಗುವುದೋ ಅಷ್ಟೂ ಆನಂದವಾಗುವುದೆಂದು ಬಲ್ಲನು. ಇಂದು ಆ ಅಮಿತ ಭಾಷಣಕ್ಕೆ ಯಾವ ಬಾಯಿಂದ ಪ್ರತಿ ಹೇಳಿಯಾನು? ತೆಪ್ಪನೆ ಒಪ್ಪಿಕೊಂಡಿರಬೇಕಾ ಯಿತು. ಅಷ್ಟೇ ಅಲ್ಲ; ಅಂದೇ ಬೆಳಗಿನ ಜಾವ ಸ್ವಲ್ಪ ನೆಗಡಿಯ ಸೂಚನೆ ಕಾಣಿಸುವುದೆಂದು ಶರ್ಮಿಳೆಯ ತೀರ್ಮಾನದ ಅನುಸಾರ ಹತ್ತು ಗ್ರೇನ್ ಕೊಯಿನಾ ನುಂಗಬೇಕಾಯಿತು. ಅದರ ಜೊತೆಗೆ ತುಳಸಿ ಸೊಪ್ಪಿನ ರಸ ಬೆರಸಿದ ಚಹ ಕುಡಿದದ್ದಾಯಿತು. ಅಡ್ಡಿ ಹೇಳಲು ಬಾಯೇ ಇರಲಿಲ್ಲ. ಏಕೆಂದರೆ ಇದಕ್ಕೆ ಮುಂಚೆ ಇಂತಹದೇ ಅವಸ್ಥೆಯಲ್ಲಿ ಅಡ್ಡಿ ಹೇಳಿದ್ದ; ಕೊಯಿನಾ ನುಂಗಲಿಲ್ಲ. ಜ್ವರವೂ ಬಂದಿತ್ತು. ಈ ವೃತ್ತಾಂತ ಶಶಾಂಕನ ಇತಿಹಾಸದಲ್ಲಿ ಅಳಿಸಲಾರದ ಅಕ್ಷರಗಳಲ್ಲಿ ಲಿಪಿಬದ್ಧವಾಗಿತ್ತು.

ಹೀಗೆ ಮನೆಯಲ್ಲಿ ಆರೋಗ್ಯ ಮತ್ತು ಆರಾಮವನ್ನು ಉದ್ದೇಶಿಸಿ ಎಷ್ಟು ಪ್ರೀತಿಪೂರ್ವಕ ಆಗ್ರಹ ತೋರುವಳೋ ಹೊರಗೆ ಗೌರವದ ರಕ್ಷಣೆ ಗಾಗಿಯೂ ಅಷ್ಟೇ ಎಚ್ಚರಿಕೆ ಕೋರುತ್ತಿದ್ದಳು. ಒಂದು ದೃಷ್ಟಾಂತ ನೆನಪಾಗುತ್ತೆ.

ಒಮ್ಮೆ ನೈನಿಟಾಲಿಗೆ ಯಾತ್ರೆ ಹೋಗಿದ್ದರು. ಮುಂಚಿನಿಂದಲೇ ರೈಲಿನ ಕಂಪಾರ್ಟ್ಮೆಂಟ್ ಕಾದಿಡಲಾಗಿತ್ತು. ಜಂಕ್ಷನ್ನಿಗೆ ಬಂದು ಗಾಡಿ ಬದಲಾ

ಯಿಸಿ ಆಹಾರ ಹುಡುಕಿಕೊಂಡು ಹೊರಟರು. ಹಿಂತಿರುಗಿ ಬಂದು ನೋಡಿದಾಗ ಸಮವಸ್ತ್ರ ಧರಿಸಿದ ದುರ್ಜನ ಮೂರ್ತಿಯೊಂದು ಅವರನ್ನು ಸ್ಥಾನ ಭ್ರಷ್ಟರನ್ನಾಗಿ ಮಾಡುವ ಪ್ರಯತ್ನದಲ್ಲಿತ್ತು. ಸ್ಟೇಶನ್ ಮಾಸ್ತರು ಬಂದು ಹೆಸರುವಾಸಿಯಾದೊಬ್ಬ ಜನರಲ್‌ನ ಹೆಸರು ಹೇಳಿ "ಕಂಪಾರ್ಟ್ಮೆಂಟ್ ಅವರಿಗಾಗಿ ಮೀಸಲಾಗಿತ್ತು. ಕೈತಪ್ಪಿ ಬೇರೆಯವರ ಹೆಸರು ಬರೆದಿರುವರು" ಎಂದನು. ಶಶಾಂಕನು ಕಣ್ಣು ಅರಳಿಸಿಕೊಂಡು ಶೀಘ್ರ ಬೇರೊಂದೆಡೆ ಹೋಗುವ ಪ್ರಯತ್ನದಲ್ಲಿದ್ದನು. ಆ ವೇಳೆಯಲ್ಲಿ ಶರ್ಮಿಳೆಯು ಗಾಡಿ ಹತ್ತಿ ಬಾಗಿಲು ಮುಂದೆ ತಳ್ಳಿ 'ನನ್ನನ್ನು ಯಾರು ಇಳಿಸುವರೋ ನೋಡೋಣ. ನಿಮ್ಮ ಜನರಲ್‌ರನ್ನು ಕರೆದುಕೊಂಡು ಬನ್ನಿ' ಎಂದಳು. ಶಶಾಂಕ ಆಗ ಇನ್ನೂ ಸರ್ಕಾರಿ ಕೆಲಸದವನಾಗಿದ್ದ; ಮೇಲಿನವರ ಜ್ಞಾತಿಗೋತ್ರದವರನ್ನು ಸಾಧ್ಯವಾದಷ್ಟು ಮಟ್ಟಿಗೆ ದೂರ ಬಿಟ್ಟು ನಿರಾಪದವಾದ ಮಾರ್ಗದಲ್ಲಿ ಹೋಗುವುದೇ ಅವನಿಗೆ ಅಭ್ಯಾಸವಾಗಿತ್ತು. ಚಟಪಟಿಸುತ್ತ "ಸರಿ— ಕೆಲಸವಿಲ್ಲ. ಇನ್ನೂ ಗಾಡಿಗಳು ಇಲ್ಲವೇ?" ಎಂದನು. ಶರ್ಮಿಳೆ ಅವನ ಮಾತುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ. ಕೊನೆಗೆ ಜನರಲ್ ಸಾಹೇಬರು ರಿಫ್ರೆಷ್ಮೆಂಟ ರೂಮಿನಿಂದ ಊಟ ತೀರಿಸಿಕೊಂಡು ಬಾಯಲ್ಲಿ ಚುಟ್ಟಾ ಕಚ್ಚಿಕೊಂಡು ಬರುತ್ತ ದೂರದಿಂದಲೇ ಸ್ತ್ರೀ ಮೂರ್ತಿಯ ಉಗ್ರತೆ ನೋಡಿ ಸರಿದು ಹೋದರು. ಶಶಾಂಕನು "ಎಷ್ಟು ದೊಡ್ಡವರು ಬಲ್ಲೆಯೋ?" ಎಂದು ಹೆಂಡತಿಯನ್ನು ಕೇಳಿದನು. ''ತಿಳಿಯುವ ಅವಶ್ಯಕತೆಯಿಲ್ಲ. ಯಾವದು ನಮ್ಮ ಗಾಡಿಯೋ ಅದರಲ್ಲಿ ಅವರು ನಿಮಗಿಂತ ದೊಡ್ಡವರಲ್ಲ" ಎಂದು ಅವಳು ಅಂದಳು.

'ಅವಮಾನಗೊಳಿಸಿದ್ದಾದರೊ?' ಎಂದು ಶಶಾಂಕ ಪ್ರಶ್ನಿಸಿದ.

'ನೀವಿರುವುದೇಕೆ?' ಎಂದು ಉತ್ತರ ಕೊಟ್ಟಳು.

ಶಶಾಂಕನು ಶಿವಪುರದ ಎಂಜನೀಯರಿಂಗ್ ಕಾಲೇಜಿನ ಪದವೀಧರ. ಮನೆಯ ಜೀವನಯಾತ್ರೆಯಲ್ಲಿ ಅವನು ಎಷ್ಟು ಸಡಿಲವಾದವನಾಗಿದ್ದರೂ ಕೆಲಸದ ವಿಷಯದಲ್ಲಿ ಅವನು ಸಂಪೂರ್ಣವಾಗಿ ಗಟ್ಟಿಗ. ಮುಖ್ಯ ಕಾರಣ ಕರ್ಮಸ್ಥಾನದಲ್ಲಿ ಉಚ್ಚದಲ್ಲಿದ್ದು ದೃಷ್ಟಿ ಬೀರುವ ಗ್ರಹ ಅರ್ಥಾತ್ ದೊಡ್ಡ ಸಾಹೇಬರು ಹೆಣ್ಣು ಗ್ರಹವಲ್ಲ. ಶಶಾಂಕನು ಡಿಸ್ಟ್ರಿಕ್ಟ್ ಎಂಜನೀಯರ್ ಕೆಲಸದಲ್ಲಿ ಆಕ್ಟಿಂಗ್‌ನಲ್ಲಿರುವಾಗ ಸಮೀಪವಾಗಿದ್ದ ಉನ್ನತಿ ತಿರುಗಿ ವಿಪರೀತ

ದಿಕ್ಕಿಗೆ ಹೋಯಿತು. ಯೋಗ್ಯತೆ ಅಲಕ್ಷಿಸಿ ಅನುಭವ ಸಾಲದಿದ್ದರೂ ಮೀಸೆ ಬೆಳೆಯದ ಆಂಗ್ಲ ಯುವಕನೊಬ್ಬನು ಅವನ ಆಸನ ಆಕ್ರಮಿಸಿದನು. ಮೇಲಿನ ಅಧಿಕಾರಿಗಳ ನೆಂಟಸ್ತಿಕೆ ಮತ್ತು ಸಿಫಾರಸಿನ ಬಲದಿಂದ ಅವನಿಗೆ ಇದು ಸಾಧ್ಯವಾಯಿತು.

ಈ ಎಳೆಯನನ್ನು ಮೇಲಣ ಪೀಠದಲ್ಲಿ ಕೂರಿಸಿ ಕೆಳಮೆಟ್ಟಲಿನಿಂದ ತಾನೇ ಕೆಲಸ ನಡೆಸಬೇಕಾಗುವುದೆಂಬ ಸಂಗತಿ ಶಶಾಂಕನು ತಿಳಿದುಕೊಂಡಿದ್ದನು. ದೊಡ್ಡ ಸಾಹೇಬರು ಬೆನ್ನು ತಟ್ಟಿ "ವೆರಿ ಸಾರಿ ಮಜುಮ್‌ದಾರ್. ಎಷ್ಟು ಬೇಗ ಸಾಧ್ಯವೋ ಅಷ್ಟು ಜಾಗ್ರತೆ ನಿನಗೆ ತಕ್ಕ ಸ್ಥಳ ಕೊಡುವೆ" ಎಂದರು. ಇವರಿಬ್ಬರೂ ಒಂದೇ § ಫ್ರೀ ಮೇಸನ್ ಲಾಡ್ಜಿಗೆ ಸೇರಿದವರು.

ಈ ವಾಗ್ದಾನ ಸಮಾಧಾನಗಳ ಸಂಗತಿ ಮಜುಮದಾರನಿಗೆ ಅರುಚಿಕರವಾಗಿತ್ತು. ಮನೆಗೆ ಬಂದು ಸಣ್ಣಪುಟ್ಟ ವಿಷಯಗಳಲ್ಲಿ ಕಟಕಟೆ ಮಾಡತೊಡಗಿದನು. ಅವನ ಆಫೀಸುಕೊಠಡಿಯ ಮೂಲೆಯೊಂದರಲ್ಲಿದ್ದ ಚಿಂದಿ ಬಟ್ಟೆ ಆಕಸ್ಮಾತ್ತಾಗಿ ಅವನ ಕಣ್ಣಿಗೆ ಬಿತ್ತು. ಸೋಫಾಗಳ ಮೇಲೆ ಹಾಸಿದ ಹಸರು ಬಣ್ಣದ ಬಟ್ಟೆ ಅವನಿಗೆ ರುಚಿಸಲಿಲ್ಲ. ಆಳು ವರಾಂಡದಲ್ಲಿ ಕಸಗುಡಿಸುತ್ತಿದ್ದ. ಧೂಳು ಹಾರುವುದೆಂದು ಅವನನ್ನು ಬಲವಾಗಿ ಗದರಿಸಿದನು. ಅನಿವಾರ್ಯವಾದಷ್ಟು ಧೂಳು ನಿತ್ಯ ಹಾರುತ್ತಲೇ ಇತ್ತು. ಆದರೆ ಗದರಿಸುವುದು ಮಾತ್ರ ಹೊಚ್ಚ ಹೊಸದು.

ಅಗೌರವದ ಸುದ್ದಿ ಹೆಂಡತಿಗೆ ತಿಳಿಸಲಿಲ್ಲ. ಈ ಸಂಗತಿ ಅವಳ ಕಿವಿಗೆ ಬಿದ್ದುದಾದರೆ ಕೆಲಸದ ಬಲೆ ಇನ್ನಷ್ಟು ಗೋಜುವುದೆಂದು ಭಾವಿಸಿದ. ಅವಳು ಮೇಲಣ ಅಧಿಕಾರಿಗಳಲ್ಲಿ ಹೋಗಿ ಅಮಧುರ ಭಾಷೆಯಲ್ಲಿ ಜಗಳವಾಡಿ ಬರುವಳೆಂದು ಎಣಿಸಿದ. ಮುಖ್ಯವಾಗಿ ಆ ಡೊನಾಲ್ಡ್‌ಸನ್ ಮೇಲೆ ಅವಳಿಗೆ ಅತಿ ಕೋಪ. ಒಮ್ಮೆ ಅವನು ಸರ್ಕೀಟ್ ಹೌಸಿನ ತೋಟದಲ್ಲಿ ಕೋತಿಗಳ ಹಾವಳಿ ಅಡಗಿಸಲು ಹಾರಿಸಿದ ಚರೆಗಳು ಶಶಾಂಕನ ಸೋಲಾ ಟೋಪಿಯನ್ನು ಛಿದ್ರ ಛಿದ್ರ ಮಾಡಿದುವು; ಮತ್ತೇನೂ ವಿಪತ್ತು ಸಂಭವಿಸಲಿಲ್ಲ. ಆದರೆ ಸಂಭವಿಸುವುದರಲ್ಲಿತ್ತೆನ್ನಲು ಸಂದೇಹವಿಲ್ಲ. ಶಶಾಂಕನದೇ ತಪ್ಪೆಂದು ಜನರು

---

§ **Free mason lodge** ಫ್ರೀ ಮೇಸನ್ ಲಾಡ್ಜ್. ಇಂಗ್ಲಂಡಿನಲ್ಲಿ ಸ್ಥಾಪಿತವಾದ ಒಂದು ಸಂಘ. ಬ್ರಿಟಿಶ್ ಸಾಮ್ರಾಜ್ಯದಲ್ಲೆಲ್ಲಾ ಶಾಖೆಗಳೊಡನೆ ಹರಡಿರುವ ಒಂದು ಸಂಘ. ಇದರ ಸದಸ್ಯರು ಜೊತೆಯ ಸದಸ್ಯರು ಉತ್ತಮ ಸ್ಥಿತಿಗೆ ಏರಲು ಎಲ್ಲ ವಿಧದಲ್ಲೂ ಸಹಾಯ ಮಾಡಬೇಕೆಂಬುದು ಸಂಘದ ನಿಯಮಗಳಲ್ಲೊಂದು.

ಅನ್ನುವುದನ್ನು ಕೇಳಿದಾಗ ಡೋನಾಲ್ಡ್ಸನ್‌ನ ಮೇಲೆ ಶರ್ಮಿಳೆಯ ಕೋಪ ಇಮ್ಮಡಿಯಾಗುತ್ತಿತ್ತು. ಕೋಪಕ್ಕೆ ಎಲ್ಲಕ್ಕೂ ಹೆಚ್ಚಿನ ಕಾರಣವಾವುದೆಂದರೆ ಇವರುಗಳಿಗೆ ಆಗದವರು ಕೋತಿಗಳನ್ನು ದ್ವೇಶಿಸಿ ಹಾರಿಸಿದ ಚರೆಗಳು ಶಶಾಂಕನ ಮೇಲೆ ಬಿದ್ದಿತಲ್ಲಾ ಈ ಎರಡು ಘಟನೆಗಳನ್ನು ಜೋಡಿಸಿ ಅತಿಯಾಗಿ ಪರಿಹಾಸ ಮಾಡುತ್ತಿದ್ದದು.

ಶಶಾಂಕನ ಪದಲಾಘವದ ಸುದ್ದಿಯನ್ನು ಶರ್ಮಿಳೆ ಸ್ವತಃ ಪತ್ತೆ ಹಚ್ಚಿದಳು. ಗಂಡನ ಸ್ಥಿತಿ ನೋಡಿಯೋ ಬಾಳುವೆಯ ಯಾವುದೋ ದಿಕ್ಕಿನಿಂದ ಅವನಿಗೆ ಮುಳ್ಳು ಚುಚ್ಚಿದೆಯೆಂದು ತಿಳಿದುಕೊಂಡಳು. ಆವೇಳೆ ಕಾರಣ ಹೊರಗೆಡವಲು ಸಾವಕಾಶವಾಗಲಿಲ್ಲ. (Constitutional agitation) ಸುವ್ಯವಸ್ಥಿತ ರೀತಿಯಲ್ಲಿ ಹೋರಾಡುವ ಮಾರ್ಗದಲ್ಲಿ ಕಾಲಿಡಲಿಲ್ಲ. Self-determination- ಹಟ ಹಿಡಿದು ಹೋರಾಡುವ ದಾರಿಯಲ್ಲಿ ಮುಂದುವರಿದಳು ಗಂಡನೊಡನೆ "ಖಂಡಿತ ಆಗದು. ಈಗಲೇ ಕೆಲಸಕ್ಕೆ ರಾಜೀನಾಮೆ ಕೊಡಿ" ಎಂದಳು.

ರಾಜೀನಾಮೆ ಕೊಡಲು ಸಾಧ್ಯವಾದರೇನೇ ಎದೆಯ ಮೇಲಿನಿಂದ ಅವಮಾನದ ಹೊರೆ ಜಾರೀತು. ಆದರೆ ಧ್ಯಾನದೃಷ್ಟಿಯ ಇದಿರಲ್ಲಿ ನಿಗದಿಯಾದ ತಿಂಗಳು ತಿಂಗಳ ವರಮಾನ, ಅದರ ಆಚೆತೀರದಲ್ಲಿ ಪೆನ್‌ಷನ್ನಿನ ನಿಶ್ಚಲವಾದ ಹೊಂಬಣ್ಣದ ರೇಖೆ ಹರಡಿ ಕಾಣಿಸುತ್ತಿತ್ತು.

ಶಶಾಂಕ ಮೌಳಿ ಎಮ್. ಎ. ಪ್ಯಾಸ್ ಮಾಡಿದನಲ್ಲಾ ಆ ವರ್ಷವೇ ಅವನ ಮಾವನವರು ಶುಭಕರ್ಮ ನಡೆಸಲು ಕಾಲಹರಣ ಮಾಡಲಿಲ್ಲ.- ಶರ್ಮಿಳೆಯೊಡನೆ ಶಶಾಂಕನ ಮದುವೆಯಾಯಿತು. ಹಣವಂತ ಮಾವನ ಸಹಾಯದಿಂದಲೇ ಅವನು ಎಂಜನೀಯರಿಂಗ್ ಪ್ಯಾಸ್ ಮಾಡಿದನು. ಅನಂತರ ಚಾಕರಿಯಲ್ಲಿ ವೇಗವಾಗಿ ಮುಂದುವರೆಯುವ ಲಕ್ಷಣ ಕಂಡು ರಾಜಾರಾಮ ಬಾಬುಗಳು ಅಳಿಯನ ಮಹದ್ಗುಣಗಳ ಮುನ್ನಡೆಯನ್ನು ತಿಳಿದುಕೊಂಡು ಮನಸ್ಸಿಗೆ ನೆಮ್ಮದಿ ತಂದುಕೊಂಡರು! ಇದುವರೆಗೆ ಪರಿಸ್ಥಿತಿ ಬದಲಾಗಬಹುದೆಂಬ ಸಂಗತಿ ಅವರ ಮಗಳಿಗೂ ತಿಳಿದಿರಲಿಲ್ಲ. ಕುಟುಂಬದಲ್ಲಿ ಆಸಕ್ತಿ ವಹಿಸದೆ ಇದ್ದವಳಲ್ಲ. ತಂದೆಯ ಮನೆಯಲ್ಲಿ ನಡೆಯುತ್ತಿದ್ದ ಹಾಗೆಯೇ ಇಲ್ಲೂ ನಡೆಸುತ್ತಿದ್ದಳು. ಕಾರಣವೇನೆಂದರೆ ಕೌಟುಂಬಿ ಹೈರಾಜ್ಯದಲ್ಲಿ ಆಡಳಿತದ ಭಾರ ಶರ್ಮಿಳೆಯ ಕೈಯಲ್ಲಿತ್ತು. ಅವಳಿಗೆ ಮಕ್ಕಳಾಗಿರಲಿಲ್ಲ. ಆಗುವ ಆಶೆಯನ್ನೂ ಬಿಟ್ಟಿರುವಳೆಂದು ತೋರುತ್ತೆ. ಗಂಡನ ಸಂಪಾದನೆಯೆಲ್ಲವೂ ಅವಳ

ಕೈಗೆ ಬಂದು ಸೇರುತ್ತಿತ್ತು. ವಿಶೇಷ ಆವಶ್ಯಕತೆ ಯಾವುದಾದರೂ ಒದಗಿದರೆ ಮನೆಯ ಅನ್ನಪೂರ್ಣೆಯ ಬಳಿ ಬಿಕ್ಷೆ ಬೇಡದೆ ಶಶಾಂಕನಿಗೆ ಬೇರೆ ದಾರಿಯಿರಲಿಲ್ಲ. ಬೇಡಿಕೆ ಅಸಂಗತವಾದುದಾದರೆ ಹಣ ಮಂಜೂರಾಗುತ್ತಿರಲಿಲ್ಲ. ತಲೆಬಗ್ಗಿಸಿ ತೀರ್ಮಾನ ಒಪ್ಪಿಕೊಳ್ಳುತ್ತಿದ್ದ. ಈ ಸಂದರ್ಭದಲ್ಲಿ ಒದಗಿದ ನಿರಾಶೆ ಇನ್ನಾವುದಾದರೊಂದು ರೀತಿಯಿಂದ ಮಧುರಸದಿಂದ ತಣಿಯುತ್ತಿತ್ತು.

"ಕೆಲಸ ಬಿಟ್ಟು ಬಿಡುವುದು ನನಗೆ ಕಷ್ಟವೇನೂ ಅಲ್ಲ. ನಿನಗೋಸ್ಕರ ಯೋಚಿಸುತ್ತೇನೆ. ನಿನಗೆ ಕಷ್ಟವಾಗುತ್ತೆ" ಎಂದು ಶಶಾಂಕನು ಹೇಳಿದನು.

"ಅನ್ಯಾಯವನ್ನು ಅಡಗಿಸಿಕೊಳ್ಳುವುದು ಅದಕ್ಕಿಂತಲೂ ಹೆಚ್ಚು ನುಂಗಲಾರದ ತುತ್ತು" ಎಂದು ಶರ್ಮಿಳೆ ಉತ್ತರ ಕೊಟ್ಟಳು.

ಶಶಾಂಕನು "ಕೆಲಸ ಮಾಡಲೇ ಬೇಕು. ಶಾಶ್ವತವಾದುದನ್ನು ಬಿಟ್ಟು ಅಶಾಶ್ವತವಾದುದನ್ನು ಹುಡುಕುತ್ತ ಹೋಗುವುದು ಯಾವ ದೇಶದಲ್ಲಿ?"

"ಆ ದೇಶ ನಿಮ್ಮ ಕಣ್ಣಿಗೆ ಕಾಣಿಸದು. ನೀವು ಎಣಿಸುತ್ತಿರಲ್ಲಾ ನಿಮ್ಮ ಚಾಕರಿಯ * ಲೂಚಿಸ್ಥಾನ, ಬೆಲೂಚಿಸ್ಥಾನದ ಮರುಭೂಮಿಯ ಅತ್ತ ಕಡೆ, ಅದರ ಹೊರಗಣ ಪ್ರಪಂಚವನ್ನು ನೀವು ಗಣಿಸುವುದೇ ಇಲ್ಲ?"

"ಹಾಳಾಯಿತು. ಆ ವಿಶ್ವಬ್ರಹ್ಮಾಂಡ ಅತಿ ದೊಡ್ಡದು. ಹಾದಿ ಬೀದಿಗಳ ಸರ್ವೆ ಮಾಡಲು ಹೋಗಲೇನು? ಅಷ್ಟು ದೊಡ್ಡ ದುರ್ಬೀನನ್ನು ಎಲ್ಲಿ ಸಂಪಾದಿಸಲಿ?"

"ದೊಡ್ಡ ದುರ್ಬೀನನ್ನು ತಯಾರಿಸುವ ಹೊರೆ ನೀವು ಹೊರಬೇಕಾಗಿಲ್ಲ. ನನ್ನ ಬಳಗದ ಮಥುರಣ್ಣ ಕಲ್ಕತ್ತೆಯಲ್ಲಿ ದೊಡ್ಡ ಕಂಟ್ರಾಕ್ಟರು. ಅವರ ಸಂಗಡ ಪಾಲುಗಾರಿಕೆಯಲ್ಲಿ ಕೆಲಸ ಮಾಡಿದರೆ ಸಾಕು."

"ಪಾಲುಗಾರಿಕೆಯ ತಕ್ಕಡಿ ಸರಿ ತೂಗದು. ಇತ್ತ ಕಡೆ ಸಾಕಷ್ಟು ತೂಕದ ಬಟ್ಟುಗಳಿಲ್ಲ. ಹೀಗಿರುವಾಗ ನೆಂಟನೊಡನೆ ಪಾಲುಗಾರಿಕೆ ಹೋದರೆ ಗೌರವ ಉಳಿಯುವುದಿಲ್ಲ."

---

* ಲೂಚಿಸ್ಥಾನ, ಬೆಲೂಚಿಸ್ಥಾನ. ಈ ಮಾತುಗಳಲ್ಲಿ ಹಾಸ್ಯ ಅಡಗಿದೆ. ಮೈದಾ ಹಿಟ್ಟಿನಿಂದ ಮಾಡಿದ ಪೂರಿ ಬಂಗಾಳಿಗಳ ಆಹಾರದ ಮುಖ್ಯ ವಸ್ತುಗಳಲ್ಲೊಂದು. ಅದಕ್ಕೆ 'ಲೂಚಿ' ಎಂದು ಹೆಸರು. ಹೊಟ್ಟೆಗೆ ತಿಂಡಿ ಒದಗಿಸುವ ಸಾಧನವಾದ ಕೆಲಸಕ್ಕೆ 'ಲೂಚಿಸ್ಥಾನ' ಎಂದು. ಕೆಲಸ ಹೋದರೆ 'ಬೆಲೂಚಿಸ್ಥಾನ' ರೊಟ್ಟಿಯಿಲ್ಲದ, ಹೊಟ್ಟೆಗಿಲ್ಲದ ದೇಶದ ಗತಿಯಾದೀತೆಂದು. ಅರ್ಥ—ಅನುವಾದಕ

"ಇತ್ತ ಕಡೆ ಯಾವ ವಿಧದಲ್ಲೂ ತೂಕ ಕಡಿಮೆಯಿಲ್ಲ. ನಿಮಗೆ ಗೊತ್ತಿಲ್ಲ. ಅಪ್ಪ ನನ್ನ ಹೆಸರಿನಲ್ಲಿ ಬ್ಯಾಂಕಿನಲ್ಲಿ ಇಟ್ಟಿರುವ ಹಣ ಬಡ್ಡಿ ಸಮೇತ ಬೆಳೆಯುತ್ತಿದೆಯಲ್ಲ! ಪಾಲುಗಾರನ ಸಂಗಡ ನೀವು ತಲೆತಗ್ಗಿಸ ಬೇಕಾದ ಆವಶ್ಯಕತೆಯೇನೂ ಇಲ್ಲ."

"ಅದು ಹೇಗೆ ಆಗುತ್ತೆ- ಆ ಹಣ ನಿನ್ನದಲ್ಲವೆ?'' ಎಂದು ಹೇಳಿ ಶಶಾಂಕನು ಎದ್ದನು. ಹೊರಗೆ ಅವನಿಗಾಗಿ ಯಾರೋ ಕಾದಿದ್ದರು.

ಶರ್ಮಿಳೆ ಗಂಡನನ್ನು ಬಟ್ಟೆ ಹಿಡಿದು ನಿಲ್ಲಿಸಿ 'ನಾನೂ ನಿಮ್ಮವಳಷ್ಟೇ?' ಎಂದಳು.

ಅನಂತರ 'ನಿಮ್ಮ ಜೇಬಿನಿಂದ ಫೌಂಟನ್‌ಪೆನ್ ಹೊರಕ್ಕೆ ತೆಗೆಯಿರಿ. ಇದೋ ಕಾಗದ. ರಾಜೀನಾಮೆಯ ಕಾಗದ ಬರೆಯಿರಿ. ಅದನ್ನು ಅಂಚೆಯಲ್ಲಿ ಕಳುಹಿಸಿದಲ್ಲದೆ ನನಗೆ ನೆಮ್ಮದಿಯಿಲ್ಲ' ಎಂದಳು.

"ನನಗೂ ಶಾಂತಿ ಇರದೆಂದು ಕಾಣುತ್ತೆ.''

ರಾಜೀನಾಮೆಯ ಕಾಗದ ಬರೆದುದಾಯಿತು.

ಮರುದಿನವೇ ಶರ್ಮಿಳೆ ಕಲಕತ್ತೆಗೆ ಹೋದಳು. ಮಧುರ ಅಣ್ಣನ ಮನೆ ತಲುಪಿದಳು. 'ಒಂದು ಸಲವಾದರೂ ತಂಗಿಯನ್ನು ಜ್ಞಾಪಿಸಿಕೊಳ್ಳ ಬಾರದೋ?' ಎಂದು ಹೆಮ್ಮೆಯೊಡನೆ ಕೇಳಿದಳು. ಇದಿರಾಳಿ ಹೆಣ್ಣಾಗಿದ್ದರೆ "ನೀನೂ ಅಷ್ಟೇ ಅಲ್ಲವೇ?'' ಎಂದನ್ನುತ್ತಿದ್ದಳು. ಗಂಡಸಿನ ತಲೆಯಲ್ಲಿ ಅಷ್ಟೆಲ್ಲಿ ಹೊಳೆಯುತ್ತೆ? ತಪ್ಪನ್ನು ಒಪ್ಪಿಕೊಂಡರು. "ಉಸಿರು ಬಿಡಲು ವಿರಾಮವಿಲ್ಲ. ನಾನು ಇರುವುದನ್ನೇ ಮರೆತು ಹೋಗುತ್ತಿರುವೆ. ಇದರ ಮೇಲೆ ನೀವುಗಳೂ ದೂರದೂರದಲ್ಲೆ ಇರುತ್ತೀರಲ್ಲವೇ?" ಎಂದರು.

"ಮಯೂರ್ ಭಂಜನಲ್ಲೊ ಮಧುರ್ ಗಂಜನಲ್ಲೊ ಒಂದು ದೊಡ್ಡ ಸೇತುವೆಯ ಕಂಟ್ರಾಕ್ಟು ನಿಮಗೆ ಸಿಕ್ಕಿದೆಂದು ಪತ್ರಿಕೆಯಲ್ಲಿ ಓದಿದೆ. ಓದಿ ಅತ್ಯಾನಂದವಾಯಿತು. ತಕ್ಷಣ ಹೊರಟು ಮಧುರ ಅಣ್ಣನವರಿಗೆ ಸ್ವತಃ 'ಕಂಗ್ರಾಜ್ಯುಲೇಟ್' ಮಾಡೋಣವೆಂದು ಹೊರಟು ಬಂದೆ" ಎಂದು ಶರ್ಮಿಳೆ ಹೇಳಿದಳು.

"ಸ್ವಲ್ಪ ನಿಧಾನಿಸಮ್ಮ. ಇನ್ನೂ ವಿಷಯ ತೀರ್ಮಾನವಾಗಿಲ್ಲ. ಸಂಗತಿ ಇಷ್ಟೆ. ನಗದು ಹಣ ಹಾಕಬೇಕಾದ ಆವಶ್ಯಕತೆಯಿದೆ. ಮಾರ್ವಾಡಿ

ಸಾಹುಕಾರನೊಡನೆ ಪಾಲುಗಾರಿಕೆ ಸೇರುವ ಮಾತು ನಡೆಯಿತು. ಕೊನೆಯಲ್ಲಿ ಪಾಲುಗಾರಿಕೆಯ ಷರತ್ತುಗಳನ್ನು ನೋಡಿದರೆ ತಿರುಳೆಲ್ಲಾ ಮಾರ್ವಾಡಿಯ ಪಾಲಿಗೂ ಚಿಪ್ಪು ಮಾತ್ರ ನನ್ನ ಪಾಲಿಗೂ ಬರುವಂತೆ ಕಾಣಿಸಿತು. ಆದ್ದರಿಂದಲೆ ಹಿಂದೆ ಹೆಜ್ಜೆ ಇಡುವ ಪ್ರಯತ್ನ."

ಶರ್ಮಿಳೆಯು ವ್ಯಸ್ತಳಾಗಿ "ಹಾಗೆ ಎಂದೂ ಆಗಲೇ ಬಾರದು. ಪಾಲುಗಾರಿಕೆಯಲ್ಲಿ ಕೆಲಸ ಮಾಡುವುದು ಅವಶ್ಯಕವಾದರೆ ನಮ್ಮ ಸಂಗಡ ಮಾಡಿ. ಇಂತಹ ಕೆಲಸ ನಿಮ್ಮ ಕೈಯಿಂದ ಜಾರಲು ಬಿಟ್ಟರೆ ಮಹಾ ಅನ್ಯಾಯವಾಗುತ್ತೆ. ನಾನಿದ್ದು ಹೀಗೆ ಆಗಲು ಅವಕಾಶ ಕೊಡೆನು."

ಆ ಮೇಲೆ ಕಾಗದ ಪತ್ರಗಳು ಸಿದ್ಧವಾಗಲು ವಿಳಂಬವಾಗಲಿಲ್ಲ. ಮಧುರ ಅಣ್ಣನವರ ಹೃದಯವೂ ಆರ್ದ್ರವಾಯಿತು.

‡ ‡ ‡ ‡

ಕೆಲಸ ಚನ್ನಾಗಿ ಮುಂದುವರೆಯಿತು. ಇದು ವರೆಗೆ ಚಾಕರಿಯ ಹೊಣೆಯಲ್ಲಿ ಶಶಾಂಕ ಮಾಡುತ್ತಿದ್ದ ಆ ಕೆಲಸಕ್ಕೆ ಮೇರೆಯಿತ್ತು. ಯಜಮಾನ ತನ್ನನ್ನು ಬಿಟ್ಟು ಹೊರಗಿನವ. ವರಮಾನ ಮತ್ತು ಜವಾಬುದಾರಿ ಈ ಎರಡು ಜೊತೆಗೂಡಿ ಸಮತೂಕದಿಂದ ಮುಂದುವರಿಯುತ್ತಿದ್ದುವು. ಈಗ ಸ್ವಂತ ಒಡೆತನ ತನ್ನನ್ನು ನಡೆಸುತಿದೆ. ಜವಾಬುದಾರಿ ಮತ್ತು ವರಮಾನ ಎರಡೂ ಒಟ್ಟುಗೂಡಿ ಒಂದಾಗಿವೆ. ದಿನಗಳು ರಜ ಮತ್ತು ಕೆಲಸಗಳ ಜಡೆ ಹೆಣೆದಂತಿಲ್ಲ. ಅವನ ಮನಸ್ಸಿನ ಮೇಲೆ ಹೊರೆಯಾಗಿರುವ ಹೊಣೆಯನ್ನು ಪ್ರಯತ್ನಪಟ್ಟರೇನೆ ಇಳಿಸಲು ಸಾಧ್ಯವೆಂದು ಅವನ ಈ ಉತ್ಸಾಹವೆಲ್ಲ. ಮತ್ತೇನಿಲ್ಲ. ಹೆಂಡತಿಯ ಸಾಲ ತೀರಿಸಲೇ ಬೇಕಾಗಿದೆ. ಅನಂತರ ಮೆಲ್ಲಗೆ ನೆಮ್ಮದಿಯಿಂದ ಇರಲು ಸಾಧ್ಯ. ಎಡಗೈ ಮಣಿಕಟ್ಟಿನಲ್ಲಿ ಗಡಿಯಾರ, ತಲೆಯ ಮೇಲೆ ಸೋಲಾ ಟೋಪಿ, ಮಡಿಚಿದ ಶರಟಿನ ತೋಳು, ಖಾಕಿ ಚಡ್ಡಿ, ತೊಗಲಿನ ಸೊಂಟದ ಪಟ್ಟಿ, ದಪ್ಪ ಅಟ್ಟೆಯ ಒರಟು ಬೂಟುಗಳು, ಕಣ್ಣುಗಳನ್ನು ಬಿಸಲಿನ ಝಳದಿಂದ ಕಾಪಾಡುವ ಸೀಲಿ ಕನ್ನಡಕಗಳು,— ಶಶಾಂಕನು ಎದ್ದನೋ ಇಲ್ಲವೋ ಹೊರಬಿದ್ದು ಕೆಲಸಕ್ಕೆ ತೊಡಗುತ್ತಿದ್ದನು. ಹೆಂಡತಿಯ ಸಾಲ ತೀರುವ ಸಮಯ ಹತ್ತಿರವಾಯಿತು. ಆಗಲೂ ಸ್ಟೀಮಿನ ಒತ್ತಡ ಇಳಿಯಲಿಲ್ಲ. ಕಾವು ಒಂದೇ ಸಮನಾಗಿಯೇ ಇತ್ತು.

ಇದುವರೆಗೆ ಸಂಸಾರದ ಆಯವ್ಯಯದ ಧಾರೆ ಒಂದೇ ಕಾಲುವೆಯಲ್ಲಿ ಹರಿಯುತ್ತಿತ್ತು. ಈಗ ಎರಡು ಶಾಖೆಯಾಯಿತು. ಒಂದು ಬ್ಯಾಂಕಿನ ದಿಕ್ಕಿಗೆ

ಹೋಯಿತು, ಮತ್ತೊಂದು ಮನೆಯ ದಿಕ್ಕಿಗೆ. ಶರ್ಮಿಳೆಯ ನಿಗದಿಯಾದ ಹಣ ಹಿಂದಿನಂತೆ ಬರುತ್ತಿತ್ತು. ಆದರ ಕೊಡುವುದು ಕೊಳ್ಳುವುದರ ರಹಸ್ಯ ಶಶಾಂಕನಿಗೆ ಅಗೋಚರ. ಮತ್ತೆ ಉದ್ಯೋಗದ ಆ ಲೆದರ್ ಬೈಂಡಿನ ಲೆಕ್ಕದ ಪುಸ್ತಕ ಶರ್ಮಿಳೆಗೆ ದುರ್ಗಮದುರ್ಗವಾಗಿತ್ತು. ಅದರಿಂದ ನಷ್ಟವೇನೂ ಇಲ್ಲ. ಆದರೆ ಗಂಡನ ಈ ವ್ಯಾಪಾರಜೀವನದ ದಾರಿ ಅವರ ಸಂಸಾರಚಕ್ರದ ಹೊರಗೆ ಬಿದ್ದುದರಿಂದ ಅತ್ತ ಅವಳ ಕಟ್ಟುನಿಟ್ಟುಗಳು ಉಪೇಕ್ಷಿತವಾಗುತ್ತಿದ್ದವು 'ಅತಿರೇಕಕ್ಕೆ ಹೋಗಬೇಡಿ. ಮೈ ಕೆಟ್ಟು ಹೋಗುವುದು" ಎಂದು ಬೇಡುತ್ತಿದ್ದಳು. ಏನೂ ಪ್ರಯೋಜನವಾಗಲಿಲ್ಲ. ಮೈ ಕೆಡದಿದ್ದುದು ಆಶ್ಚರ್ಯಕರವೇ. ಆರೋಗ್ಯದ ವಿಷಯವಾಗಿ ಉದ್ವೇಗ, ವಿಶ್ರಾಂತಿಯ ಅಭಾವದ ವಿಷಯವಾದ ಆಕ್ಷೇಪಣೆ, ಸೌಖ್ಯದ ಸಣ್ಣಪುಟ್ಟ ತೊಡಕುಗಳನ್ನು ಕುರಿತು ವ್ಯಸ್ತತೆ ಇವೇ ಮುಂತಾದ ದಾಂಪತ್ಯಿಕ ಆಕ್ಷೇಪಗಳನ್ನು ಬಿರುಸಿನಿಂದ ಉಪೇಕ್ಷಿಸಿ ಶಶಾಂಕನು ಬೆಳಗ್ಗೆ ಹೊತ್ತಿಗೆ ಮುಂಚೆ ಸೆಕೆಂಡ್‌ಹ್ಯಾಂಡ್ ಫೋರ್ಡ್ ಗಾಡಿಯನ್ನು ಸ್ವತಃ ನಡೆಸುತ್ತ ಹಾರ್ನ್ ಬಾರಿಸುತ್ತ ಹೊರಡುತ್ತಿದ್ದನು. ಎರಡು ಎರಡೂವರೆಯ ಹೊತ್ತಿಗೆ ಮನೆಗೆ ಹಿಂತಿರುಗಿ ಗೊಣಗೊಣಗಾಟಗಳನ್ನು ಕೇಳುತ್ತಿದ್ದನು. ಊಟವನ್ನು ಜಾಗ್ರತೆ ಮುಗಿಸುತ್ತಿದ್ದನು.

ಒಂದು ದಿನ ಅವನ ಮೋಟಾರಿಗೆ ಮತ್ತಾರದೋ ಗಾಡಿ ಢಿಕ್ಕಿ ಹೊಡೆಯಿತು. ತಾನು ಉಳಿದುಕೊಂಡನು. ಗಾಡಿ ಚೂರು ಚೂರಾಯಿತು. ಅದನ್ನು ರಿಪೇರಿ ಮಾಡಲು ಕಳುಹಿಸಿದನು. ಶರ್ಮಿಳೆ ಗಾಬರಿ ಬಿದ್ದಳು. ಕಣ್ಣೀರು ಕೋಡಿ ಹರಿಸುತ್ತ 'ಗಾಡಿಯನ್ನು ನೀವು ಖಂಡಿತ ನಡೆಸಕೂಡದು' ಎಂದಳು.

ಶಶಾಂಕನು ನಗುತ್ತ "ಪರರ ಕೈಯಿಂದ ಒದಗುವ ಆಪತ್ತೂ ಇದೇ ವಿಧವಾದ ಹಾನಿಯನ್ನುಂಟು ಮಾಡದೇ?" ಎಂದನು.

ಒಂದು ದಿನ ಯಾವುದೋ ರಿಪೇರಿ ಕೆಲಸದ ಮೇಲ್ವಿಚಾರಣೆ ನಡೆಸ ಹೋಗಿದ್ದಾಗ ಮುರಿದ ಜಾಯಿಕಾಯಿ ಪೆಟ್ಟಿಗೆಯ ಮೊಳೆಯೊಂದು ಜೋಡನ್ನು ಛೇದಿಸಿ ಕಾಲಿನೊಳಗೆ ಹೊಕ್ಕಿತು. ಆಸ್ಪತ್ರೆಗೆ ಹೋಗಿ ಬ್ಯಾಂಡೇಜ್ ಕಟ್ಟಿಸಿಕೊಂಡು Antititanus Injection ಧನುಷ್ಟಂಕಾರ ನಿವಾರಿಸುವ ಸೂಜಿ ಚುಚ್ಚಿಸಿಕೊಂಡು ಬಂದನು. ಅಂದು ಶರ್ಮಿಳೆ ಅತ್ತು ಕರೆದು "ಕೆಲವು ದಿನಗಳಾದರೂ ಮನೆಯಲ್ಲಿದ್ದು ವಿಶ್ರಮಿಸಿಕೊಳ್ಳಿರಿ" ಎಂದಳು.

ಶಶಾಂಕನು ಅತ್ಯಂತ ಸಂಕ್ಷೇಪವಾಗಿ 'ಕೆಲಸ!' ಎಂದನು. ವಾಕ್ಯವನ್ನು ಇದಕ್ಕಿಂತ ಸಂಕ್ಷೇಪ ಮಾಡಲು ಸಾಧ್ಯವಿಲ್ಲ.

ಶರ್ಮಿಳೆ 'ಆದರೆ' ಎಂದು ಮಾತಿಗಾರಂಭಿಸಿದಳು. ಶಶಾಂಕನು ಮಾತೇ ಇಲ್ಲದೆ ಬ್ಯಾಂಡೇಜ್ ಸಮೇತ ಕೆಲಸಕ್ಕೆ ಹೊರಟು ಹೋದನು.

ಶಕ್ತಿಪ್ರದರ್ಶನಕ್ಕೆ ಈಗ ಧೈರ್ಯವೇ ಇಲ್ಲ. ಗಂಡನು ತನ್ನ ಕ್ಷೇತ್ರದಲ್ಲಿ ತನ್ನ ಸಾಮರ್ಥ್ಯವನ್ನು ತೋರಿಸಿರುವನು. ಯುಕ್ತಿ, ತರ್ಕ, ದಮ್ಮಯ್ಯಗುಡ್ಡೆ ಎಲ್ಲಕ್ಕೂ "ಕೆಲಸವಿದೆ" ಎಂಬ ಒಂದೇ ಉತ್ತರ. ಶರ್ಮಿಳೆ ಕಾರಣವಿಲ್ಲದೆ ಉದ್ವಿಗ್ನಳಾಗಿ ಕುಳಿತಿರುತಿದ್ದಳು. ಹೊತ್ತಾದರೆ ಮೋಟಾರಿಗೆ ಏನೋ ವಿಪತ್ತು ಸಂಭವಿಸಿದೆಯೆಂದು ಎಣಿಸುವಳು. ಬಿಸಿಲ ಝಳದಿಂದ ಗಂಡನ ಮುಖ ಕೆಂಪಗಾದರಾಯಿತು. ಇನ್‌ಫ್ಲೂಯನ್‌ಜಾ ಆಗಿದೆಯೆಂದು ಎಣಿಸುವಳು. ಹೆದರುತ್ತ ಹೆದರುತ್ತ ಡಾಕ್ಟರ್ ಸುದ್ದಿ ಎತ್ತಲು ಯೋಚಿಸುವಳು. ಗಂಡನ ಭಾವ ಭಂಗಿ ನೋಡಿ ತೆಪ್ಪಗಾಗುವಳು. ಮನಬಿಚ್ಚಿ ತನ್ನ ಉದ್ವೇಗವನ್ನು ತೋರಿಸಿಕೊಳ್ಳಲು ಈಗೀಗ ಅವಳಿಗೆ ಸಾಧ್ಯವಾಗಿರಲಿಲ್ಲ.

ನೋಡ ನೋಡುತ್ತ ಶಶಾಂಕನು ಬಿಸಿಲಿನಿಂದ ಕಪ್ಪಗೂ ಗಟ್ಟಿಮುಟ್ಟಾಗಿಯೂ ಆದನು. ಮೈ ಮುಚ್ಚುವಷ್ಟು ಬಟ್ಟೆ, ಅತ್ಯಾವಶ್ಯಕವಾದಷ್ಟು ವಿರಾಮ, ನಡೆಯಲ್ಲಿ ದ್ರುತಗತಿ, ಮಾತುಕತೆ ಕಿಡಿಯಂತೆ. ಶರ್ಮಿಳೆಯ ಸೇವೆ ಈ ದ್ರುತಲಯದೊಡನೆ ಮೇಳಗೂಡಿಸಿ ಮುಂದರಿಯಲು ಯತ್ನಿಸುತ್ತಿತ್ತು. ಸ್ಟೌವಿನ ಹತ್ತಿರ ಅಷ್ಟಿಷ್ಟು ಆಹಾರಪದಾರ್ಥಗಳಿರುತ್ತಿದ್ದುವು. ಸದಾ ಬಿಸಿಯಾಗಿ ಇಟ್ಟಿರಲು ಯತ್ನಿಸುವಳು. ಯಾವ ವೇಳೆಯಲ್ಲಿ ಗಂಡ ಅಕಸ್ಮಾತ್ತಾಗಿ ಅವೇಳೆಯಲ್ಲಿ ಹೊರಬಿದ್ದು 'ಬರಲು ಹೊತ್ತಾಗುವುದು' ಎನ್ನುವನೋ. ಮೋಟಾರಿನಲ್ಲಿ ಸೋಡಾ ವಾಟರ್ ಮತ್ತು ಬಿಸ್ಕತ್ತು ಮುಂತಾದವು ಇರುತ್ತಿದ್ದುವು. ತಲೆ ನೋವಾದರೆ ಉಪಯೋಗವಾಗಲೆಂದು ಯೂ. ಡಿ. ಕೋಲೋನ್ ಶೀಸೆಯೊಂದನ್ನು ಸುಲಭವಾಗಿ ಕಣ್ಣಿಗೆ ಕಾಣುವಂತೆ ಇಟ್ಟಿರುತ್ತಿದ್ದಳು. ಗಾಡಿ ಹಿಂತಿರುಗಿದಾಗ ಪರೀಕ್ಷಿಸಿ ನೋಡಿ ಯಾವುದೂ ಉಪಯೋಗವಾಗದಿರುವುದನ್ನು ಕಂಡು ಮನಸ್ಸಿನಲ್ಲಿ ನೊಂದುಕೊಳ್ಳುವಳು. ಮಲಗುವ ಮನೆಯಲ್ಲಿ ಇಸ್ತ್ರಿ ಮಾಡಿ ಮಡಿಚಿದ ಮಡಿ ಬಟ್ಟೆಗಳು ಸದಾ ಸಿದ್ಧವಾಗಿರುತ್ತಿದ್ದುವು. ಆದರೂ ವಾರದಲ್ಲಿ ನಾಲ್ಕು ದಿನವಾದರೂ ಬಟ್ಟೆ ಬದಲಾಯಿಸಲು ಆಗುತ್ತಿರಲಿಲ್ಲ. ಕುಟುಂಬದ ಆಗು ಹೋಗುಗಳ ವಿಷಯವಾದ ಆಲೋ

ಚನೆಯೂ ಗಂಡಹೆಂಡಿರಲ್ಲಿ ಅತಿಸಂಕ್ಷೇಪವಾಗಿ ನಡೆಯುತ್ತಿತ್ತು. ಎಕ್ಸ್‌ಪ್ರೆಸ್ ತಂತಿಯಲ್ಲಿನ ಇಡಿದು ಕುಟ್ಟಿದ ಭಾಷೆಯಂತೆ ಅದೂ ನಡೆಯುತ್ತ ನಡೆಯುತ್ತ ಹೋಗುವಾಗ 'ಇದೋ ಕೇಳಿದಿರಾ?' ಎಂದು ಕೂಗಿ ಹೇಳಬೇಕಾಗುತ್ತಿತ್ತು. ಅವನ ಉದ್ಯೋಗದಲ್ಲಿ ಶರ್ಮಿಳೆಗೆ ಒಂದಿಷ್ಟು ಸಂಬಂಧವಿತ್ತಲ್ಲ ಅದೂ ಹರಿದು ಹೋಯಿತು ಅವಳ ಹಣ ಬಡ್ಡಿ ಸಹಿತ ಹಿಂದಿರುಗಿತ್ತು. ಬಡ್ಡಿಯನ್ನೂ ಲೆಕ್ಕಾಚಾರ ಮಾಡಿ ಪದ್ಧತಿಯಂತೆ ರಶೀದಿ ತೆಗೆದುಕೊಂಡು ಕೊಟ್ಟಿದ್ದನು. ಶರ್ಮಿಳೆಯು "ಸಾಕು. ಸಾಕು. ಪ್ರೀತಿಯಲ್ಲೂ ಗಂಡಸು ತನ್ನನ್ನು ಸಂಪೂರ್ಣವಾಗಿ ಅರ್ಪಿಸಬಾರದೇ ? ಸ್ವಲ್ಪ ಸ್ಥಳ ಇಟ್ಟುಕೊಂಡಿರಬೇಕು. ಅದೀಗ ಅವರ ಪೌರುಷದ ಅಭಿಮಾನ" ಎನ್ನುವಳು.

ಲಾಭದ ಹಣದಿಂದ ಶಶಾಂಕ ಮನಸ್ಸಿಗೆ ಒಪ್ಪಿಗೆಯಾದಂತೆ ಭವಾನೀಪುರದಲ್ಲಿ ಒಂದು ಮನೆ ಕಟ್ಟಿಸಿದನು ತನ್ನ ಅಭಿರುಚಿಗೆ ತಕ್ಕ ಹಾಗೆ ಕಟ್ಟಿದ್ದನು. ಆರೋಗ್ಯ, ಸೌಖ್ಯ ಇವುಗಳನ್ನು ಉದ್ದೇಶಿಸಿ ಹೊಸ ಹೊಸ 'ಪ್ಲಾನು'ಗಳು ತಲೆಯಲ್ಲಿ ಹೊಳೆಯುತ್ತಿದ್ದುವು.

ಶರ್ಮಿಳೆಯನ್ನು ಆಶ್ಚರ್ಯದಲ್ಲಿ ಮುಳುಗಿಸುವ ಪ್ರಯತ್ನ. ಅವಳೂ ಸಂಪ್ರದಾಯವನ್ನನುಸರಿಸಿ ಆಶ್ಚರ್ಯಪಡುವಳು. ಇಂಜಿನೀಯರ್ ಬಟ್ಟೆ ಒಗೆಯುವ ಯಂತ್ರ ಒಂದನ್ನು ಸ್ಥಾಪಿಸಿದ್ದನು ಶರ್ಮಿಳೆ ಅದನ್ನು ತಿರುವಿ ಸುತ್ತಿ ಹೊಗಳುವಳು- ಮನಸ್ಸಿನಲ್ಲಿ "ಬಟ್ಟೆ ಈಗ ಹೇಗೆ ಅಗಸನಲ್ಲಿಗೆ ಹೋಗುತ್ತಿವೆಯೋ ಹಾಗೆಯೇ ಮುಂದೆಯೂ ಹೋಗುವವು. ಕೊಳೆ ಬಟ್ಟೆಗೆ ಕತ್ತೆಯು ವಾಹನ ಅರ್ಥವಾಗಿದೆ. ಅದರ ವೈಜ್ಞಾನಿಕ ವಾಹನ ಅರ್ಥವಾಗದ ವಿಷಯ" ಎಂದು ಅಂದುಕೊಳ್ಳುವಳು. ಆಲೂಗಡ್ಡೆಯ ಸಿಪ್ಪೆ ಸುಲಿಯುವ ಯಂತ್ರವನ್ನು ದೃಷ್ಟಿಸಿದಳು "ಆಲೂಗಡ್ಡೆಯ ಪಲ್ಯ ಮಾಡುವ ಕಷ್ಟ ಹನ್ನೆರಡಾಣೆಯಷ್ಟು ದೂರವಾಯಿತು" ಎಂದಳು. ಹಿಂದಿನಿಂದ ಅದು ತೂತು ತಪ್ಪಲೆ ಮುರುಕು ಕೆಟಲಿಗಳೊಡನೆ ಮೂಲೆಯ ಪಾಲಾಗಿತ್ತೆಂದು ತಿಳಿಯಿತು.

ಮನೆ ಕಟ್ಟಿ ಮುಗಿದಾಗ ಈ ಸ್ಥಾವರ ಪದಾರ್ಥದ ವಿಷಯವಾಗಿ ಶರ್ಮಿಳೆಯ ರುದ್ಧಸ್ನೇಹ ಹೊರ ಹೊಮ್ಮಿತು. ಇಟ್ಟಿಗೆ ಕಟ್ಟಡದ ಶಕ್ತಿ ಅಪಾರ. ಉಜ್ಜಿ ತೊಳೆಯುವುದು, ಅಲಂಕರಿಸುವುದು ಮುಂತಾದವುಗಳಲ್ಲಿ ಇಬ್ಬಿಬ್ಬರು ಆಳುಗಳು ದಣಿಯುವರು. ಒಬ್ಬನಂತೂ ಕೆಲಸ ಬಿಟ್ಟೇ ನಡೆದನು. ಮನೆಯ ಸಜ್ಜುಗೊಳಿಸುವಿಕೆಯೆಲ್ಲ ಶಶಾಂಕನನ್ನು ಉದ್ದೇಶಿಸಿಯೇ ನಡೆಯುತ್ತಿತ್ತು. ಇತ್ತೀಚೆಗೆ ಅವನು ಬೈಠಕ್‌ಖಾನೆಯಲ್ಲಿ ತೋರುತ್ತಿರಲೇ ಇಲ್ಲ. ಆದರೂ ಅವನ

ದಣಿದ ಬೆನ್ನೆಲುಬನ್ನು ಉದ್ದೇಶಿಸಿ ತರಹವಾರಿ ದಿಂಬುಗಳು ಅಣಿಮಾಡಲ್ಪಟ್ಟಿದ್ದವು. ಫೂಲದಾನಿಗಳು ಒಂದೆರಡೇ ಅಲ್ಲ. ಟೀಪಾಯಿಗಳು, ಮೇಜುಗಳೆಲ್ಲಾ ವಿಧವಿಧವಾದ ಹೂಗಳಿಂದ ಶೋಭಿಸುತ್ತಿದ್ದುವು. ಇತ್ತೀಚೆಗೆ ಮಲಗುವ ಮನೆಗೆ ಶಶಾಂಕನ ಹಗಲು ಪ್ರವೇಶ ನಿಂತುಬಿಟ್ಟಿತು. ಅಷ್ಟೇ ಅಲ್ಲ ಅವನಿಗೆ ಹೊಸ ಕ್ಯಾಲೆಂಡರಿನಲ್ಲಿ ಆದಿತ್ಯವಾರವು ಸೋಮವಾರದ ಅವಳಿಸೋದರನಾಗಿತ್ತು. ಕೆಲಸ ಇಲ್ಲದ ಇತರ ರಜೆಯ ದಿನಗಳಲ್ಲೂ ಅವನು ಎಲ್ಲಿಂದಲೋ ಹುಡುಕಿ ಸಣ್ಣಪುಟ್ಟ ಕೆಲಸಗಳನ್ನು ಮಾಡುತ್ತಿದ್ದನು. ಆಫೀಸುರೂಮಿಗೆಹೋಗಿ ಪ್ಲಾನ್ ಬರೆಯುವ ಎಣ್ಣೆಯ ಕಾಗದವನ್ನೋ ಅಥವಾ ಲೆಕ್ಕ ಪತ್ರಗಳನ್ನೋ ಎತ್ತಿಕೊಂಡು ಕೂಡುತ್ತಿದ್ದನು. ಆಗಲೂ ಪದ್ಧತಿ ತಪ್ಪುತ್ತಿರಲಿಲ್ಲ. ದಪ್ಪ ದಿಂಬು ಹಾಕಿದ ಸೋಫಾದ ಇದಿರಿನಲ್ಲಿ ಪಶ್ಮಿಯ * ಮೆಟ್ಟು ಸಿದ್ಧವಾಗಿರುತ್ತಿತ್ತು. ಮೇಜಿನ ಮೇಲೆ ಪಾನ್‌ದಾನಿಯಲ್ಲಿ ಸುಣ್ಣ ಹಚ್ಚಿ ಸಿದ್ಧಪಡಿಸಿದ ಬೀಡಾಗಳು. ಅಲ್ಮಾರಿಯಲ್ಲಿ ನೆರಿಹಿಡಿದ ಧೋತಿ, ರೇಷ್ಮೆಯ ಪಂಜಾಬಿ ಜುಬ್ಬ ಅಡಕಿರುತ್ತಿದ್ದವು. ಆಫೀಸ್ ರೂಮಿನಲ್ಲಿ ಇತರರು ಕೈಯಿಡುವುದೆಂದರೆ ಸಾಹಸದ ಕೆಲಸವೇ. ಆದರೂ ಶಶಾಂಕನಿಲ್ಲದ ವೇಳೆಯಲ್ಲಿ ಕೈಯಲ್ಲಿ ಬಟ್ಟೆ ಹಿಡಿದುಕೊಂಡು ಶರ್ಮಿಳೆ ಅಲ್ಲಿ ಪ್ರವೇಶಿಸುವಳು. ಅಲ್ಲಿನ ರಕ್ಷಣೀಯ ವರ್ಜನೀಯ ಪದಾರ್ಥಗಳ ವ್ಯೂಹದ ನಡುವೆ ಒಪ್ಪ ಓರಣವನ್ನು ತರುವ ಅವಳ ಪ್ರಯತ್ನ ಎಡೆಬಿಡದೆ ಇರುತ್ತಿತ್ತು.

ಶರ್ಮಿಳೆ ಸೇವೆ ಮಾಡುವಳು. ಆದರೆ ಇತ್ತೀಚೆಗೆ ಅವಳ ಸೇವೆಯ ಬಹು ಅಂಶ ಅಗೋಚರವಾದುದು. ಹಿಂದೆ ಅವಳ ಆ ಆತ್ಮನಿವೇದನವಿತ್ತಲ್ಲ ಪ್ರತ್ಯಕ್ಷವಾಗಿ ಈಗ ಅದರ ಪ್ರಯೋಗ ಪ್ರತೀಕವಾಗಿರುತ್ತಿತ್ತು. ಮನೆ ಅಲಂಕರಿಸುವುದು, ತೋಟ ಮಾಡಿಸುವುದು, ಶಶಾಂಕ ಕೂಡುವ ಕುರ್ಚಿಗೆ ರೇಷ್ಮೆಯ ಆಸನ ಹಾಕುವುದು, ತಲೆದಿಂಬಿನ ಚೀಲಗಳ ಅಂಚಿಗೆ ಕಸೂತಿಯ ಕೆಲಸ ಮಾಡುವುದು, ಆಫೀಸಿನ ಮೇಜಿನ ಮೂಲೆಯಲ್ಲಿ ನೀಲಿ ಸ್ಫಟಿಕದ ಫೂಲ್‌ದಾನಿಯಲ್ಲಿ ಸುಗಂಧರಾಜ ಹೂವುಗಳನ್ನು ಅಡಿಕಿಡುವುದು ಇತ್ಯಾದಿ.....

ತನ್ನ ಕೈಯ ಅರ್ಘ್ಯವನ್ನು ಪೂಜಾವೇದಿಕೆಯಿಂದ ದೂರದಲ್ಲಿ ಸ್ಥಾಪಿಸಬೇಕಾಯಿತು. ಆದರೆ ಅತಿ ದುಃಖದೊಡನೆ ಅದು ಸಾಧಿಸಿತು. ಕೆಲವೇ ದಿನಗಳ ಮುಂಚೆ ಅವಳ ಎದೆಯಲ್ಲಿ ತಗುಲಿದ ಗಾಯವಿದೆಯಲ್ಲಾ ಕಣ್ಣೀರು ಹರಿಸಿ ಹರಿಸಿ ಅದನ್ನು ಗುಣಪಡಿಸಬೇಕಾಯಿತು. ಅಂದು ಕಾರ್ತಿಕ ಶುದ್ಧ

* ಕಾಶ್ಮೀರದಲ್ಲಿ ಉಣ್ಣೆಯ ದಾರದಿಂದ ಹೆಣೆದು ತಯಾರಾದ ಮೆಟ್ಟು.

ಚತುರ್ದಶಿ. ಶಶಾಂಕನ ಜನ್ಮದಿನ. ಶರ್ಮಿಳೆಯ ಬಾಳುವೆಯಲ್ಲಿ ಎಲ್ಲಕ್ಕೂ ದೊಡ್ಡದಾದ ಹಬ್ಬ. ಪದ್ಧತಿಯಂತೆ ಬಂಧು ಬಾಂಧವರಿಗೆ ಔತಣ ಕೊಟ್ಟಿದ್ದಳು. ಮನೆ ಬಾಗಿಲುಗಳನ್ನು ಹೂವು, ಎಲೆಗಳಿಂದ ವಿಶೇಷವಾಗಿ ಅಲಂಕರಿಸಿದ್ದಳು.

ಬೆಳಗಿನ ಕೆಲಸ ಮುಗಿಸಿ ಮನೆಗೆ ಬಂದ ಶಶಾಂಕನು "ಇದೇನು ಸಮಾಚಾರ- ಬೊಂಬೆಯ ಮದುವೆಯೇನು?" ಎಂದನು.

" ಹಣೆ ಬರಹ. ಇಂದು ನಿಮ್ಮ ಹುಟ್ಟಿದ ಹಬ್ಬ. ಅದನ್ನು ಮರತೇ ಬಿಟ್ಟರೇನು? ಏನೇ ಆಗಲಿ ಮಧ್ಯಾಹ್ನ ನೀವು ಮನೆಯಿಂದ ಹೊರಗೆ ಹೋಗುವುದು ಖಂಡಿತ ಸಾಧ್ಯವಾಗದು."

" ಬಿಸ್‌ನೆಸ್ ಮೃತ್ಯು ದಿನವನ್ನು ಮತ್ತಾವ ದಿನವೂ ತಲೆ ಬಾಗಿಸದು."

"ಇನ್ನೊಂದೂ ಹೇಳೆನು. ಇಂದು ನೆಂಟರಿಷ್ಟರಿಗೆ ಔತಣ ಕೊಟ್ಟರುವೆ."

" ನೋಡು ಶರ್ಮಿಳೆ, ನೀನು ನನ್ನನ್ನು ಆಟದ ಸಾಮಾನು ಮಾಡಿ ವಿಶ್ವದ ಜನರನ್ನು ಕರೆದು ಆಟವಾಡಲು ಯತ್ನಿಸಬೇಡ" ಎಂದು ಹೇಳಿ ವೇಗವಾಗಿ ನಡೆದು ಬಿಟ್ಟನು. ಶರ್ಮಿಳೆ ಮಲಗುವ ಕೊಠಡಿಯ ಬಾಗಿಲು ಮುಚ್ಚಿಕೊಂಡು ಸ್ವಲ್ಪ ಹೊತ್ತು ಅತ್ತಳು.

ಅಪರಾಹ್ನದಲ್ಲಿ ನೆಂಟರಿಷ್ಟರು ಬಂದರು. ಬಿಸ್‌ನೆಸ್ಸಿನ ಸರ್ವೋಚ್ಚ ಅಧಿಕಾರವನ್ನು ಅವರುಗಳೆಲ್ಲ ಒಪ್ಪಿಕೊಂಡರು. ಇದೊಂದು ವೇಳೆ ಕಾಳಿದಾಸನ ಜನ್ಮದಿನವಾಗಿದ್ದುದಾದರೆ ಆಗ 'ಶಕುಂತಳೆ'ಯ ಮೂರನೆಯ ಅಂಕ ಬರೆಯಬೇಕಾದ ಅವಶ್ಯಕತೆಯನ್ನು ಸಂಪೂರ್ಣ ಅನಾವಶ್ಯಕವೆಂದು ಎಲ್ಲರೂ ತೀರ್ಮಾನಿಸುವರು. ಆಮೋದ ಪ್ರಮೋದ ಯಥೇಷ್ಟವಾಗಿ ನಡೆಯಿತು. ಸಾಲೂ ಬಾಬುಗಳು ನಾಟಕದವರ ನಕಲೀ ಮಾಡಿ ನೆರೆದಿದ್ದವರನ್ನೆಲ್ಲ ನಗಿಸಿದರು. ಶರ್ಮಿಳೆಯೂ ಆ ನಗುವಿನಲ್ಲಿ ಭಾಗ ವಹಿಸಿದಳು. ಶಶಾಂಕನಿಲ್ಲದ ಶಶಾಂಕನ ಜನ್ಮದಿನ ಶಶಾಂಕನನ್ನೇರಿರುವ ಬಿಸ್‌ನೆಸ್ಸಿನ ಇದಿರಿನಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿತು.

ಬಹು ದುಃಖವಾಯಿತು. ಆದರೂ ಶರ್ಮಿಳೆಯ ಮನಸ್ಸು ಓಡುತ್ತಿರುವ ಶಶಾಂಕನ ಬಿಸಿನೆಸ್ ರಥದ ಧ್ವಜಕ್ಕೆ ದೂರದಿಂದಲೇ ಸಾಷ್ಟಾಂಗ ನಮಸ್ಕಾರ ಮಾಡಿತು. ಅವನ ಬಳಿ ಆ ವೀರಲಸಾಧ್ಯವಾದ ಕೆಲಸ. ಯಾರ ದಾಕ್ಷಿಣ್ಯಕ್ಕೂ ಒಳಗಾಗದದು. ಹೆಂಡತಿಯ ಬೇಡಿಕೆ, ಸ್ನೇಹಿತರ ಔತಣ,

ಸ್ವಂತ ಸೌಖ್ಯ ಯಾವುದಕ್ಕೂ ತಲೆ ತಗ್ಗಿಸದದು. ಇಂತಹ ಕೆಲಸದಲ್ಲಿ ಶ್ರದ್ಧೆ ತೋರಿ ಗಂಡಸು ತನ್ನಲ್ಲಿ ಗೌರವ ತೋರುವನು. ಇದು ಅವನು ತನ್ನ ಶಕ್ತಿಯ ಬಳಿ ತನ್ನನ್ನು ನಿವೇದಿಸಿಕೊಳ್ಳುವುದು. ಶರ್ಮಿಳೆ ಸಂಸಾರದ ನಿತ್ಯಗಟ್ಟಲೆಯ ಕರ್ಮಧಾರೆಯನ್ನು ದಾಟಿ ಅತಿ ಸಂಭ್ರಮದೊಡನೆ ಆಚೆಯ ದಡದ ಶಶಾಂಕನ ಕರ್ತವ್ಯಪಾಲನೆಯನ್ನು ನಿರೀಕ್ಷಿಸುವಳು. ಅದರ ಅಧಿಕಾರ ಬಹು ವ್ಯಾಪಕ. ಮನೆಯ ಎಲ್ಲೆ ದಾಟಿ ಅದು ಬಹು ದೂರ ದೇಶಕ್ಕೆ, ದೂರದ ಸಮುದ್ರದ ಅತ ಕಡೆ, ಕಂಡು ಕಾಣದ ಎಷ್ಟು ಜನರನ್ನು ತನ್ನ ಅಧಿಕಾರದ ಬಲೆಯಲ್ಲಿ ಎಳೆದು ತರುವದು. ಗಂಡಸಿಗೆ ನಿತ್ಯವೂ ತನ್ನ ಅದೃಷ್ಟದೊಡನೆ ಹೋರಾಟ. ಆದ್ದರಿಂದಲೇ ತನ್ನ ಮಾರ್ಗದಲ್ಲಿ ಸ್ತ್ರೀಯರ ಕೋಮಲ ಬಾಹುಬಂಧನ ಅಡ್ಡಿ ಮಾಡಲು ಬಂದರೆ ಗಂಡಸು ಅದನ್ನು ಮಮತೆಯೇ ಇಲ್ಲದೆ ಛಿನ್ನ ಮಾಡಿ ವೇಗವಾಗಿ ಮುಂದುವರಿಯದಿರುವದೆ? ಈ ಮಮತಾ ಹೀನತೆಯನ್ನು ಶರ್ಮಿಳೆ ಭಕ್ತಿಯೊಡನೆ ಅಂಗೀಕರಿಸಿದಳು. ಮಧ್ಯೆ ಮಧ್ಯೆ ಸುಮ್ಮನಿರಲು ಆಗುತ್ತಿರಲಿಲ್ಲ. ತನಗೆ ಅಧಿಕಾರವಿಲ್ಲದೆಡೆಯಲ್ಲೂ ಅವಳ ಉತ್ಕಂಠತೆ ಅವಳನ್ನು ಎಳೆದು ತರುತ್ತಿತ್ತು. ಪೆಟ್ಟು ತಗಲುವದು. ಆ ಪೆಟ್ಟು ತಗಲಬೇಕಾದುದೇ ಎಂದೆಣಿಸಿ ವ್ಯಥಿತ ಮನದೊಡನೆ ದಾರಿ ಬಿಟ್ಟು ಹಿಂತಿರುಗುವಳು. ತನ್ನ ದಾರಿಯಲ್ಲಿ ತಡೆಯಿರುವಲ್ಲಿ 'ನಿನ್ನ ದೃಷ್ಟಿ ಇರಲಿ' ಎಂದು ದೇವರನ್ನು ಬೇಡುವಳು.

## ನೀರದ

ಬ್ಯಾಂಕಿನಲ್ಲಿ ಜಮೆ ಆಗಿದ್ದ ಹಣ ಮೇಲೇರಿ ಈ ಕುಟುಂಬದ ಸಂಪತ್ತು ಆರು ಅಂಕದ ಮೊತ್ತದೆಡೆಗೆ ಮುಂದುವರಿಯುತ್ತಿದ್ದ ಕಾಲದಲ್ಲಿ ಗೊತ್ತಿಲ್ಲದಯಾವುದೋ ರೋಗವೊಂದು ಶರ್ಮಿಳೆಯನ್ನು ಆಕ್ರಮಿಸಿತು. ಅವಳಿಗೆ ಏಳುವುದಕ್ಕೂ ಶಕ್ತಿ ಇಲ್ಲವಾಯಿತು. ಈ ಕಾರಣದಿಂದ ದುರ್ಭಾವನೆಗಳು ಸಂಭವಿಸಿತಲ್ಲ ಅವನ್ನು ವಿವರಿಸಿ ಹೇಳಬೇಕಾದುದು ಆವಶ್ಯಕ.

ರಾಜಾರಾಮಬಾಬುಗಳು ಶರ್ಮಿಳೆಯ ತಂದೆ. ಬಾರಿಸಾಲಿನ ಎಲ್ಲೆಯಲ್ಲಿ ಗಂಗೆಯ ಮುಖದಲ್ಲಿ ಅವರಿಗೆ ಜಮೀನುದಾರಿಯಿತ್ತು. ಅದಲ್ಲದೆ ಷಾಲಿಮಾರ್ ಘಟ್ಟದ ಹಡಗು ತಯಾರಿಸುವ ಕಂಪನಿಯಲ್ಲೂ ಅವರಿಗೆ ಷೇರುಗಳಿದ್ದವು. ಅವರು ಹುಟ್ಟಿದ್ದು ಹಿಂದಿನ ಕಾಲಕಳೆಯುತ್ತ ಇಂದಿನ ಕಾಲ ಆರಂಭವಾಗುವಾಗ. ಕುಸ್ತಿ, ಷಿಕಾರಿ ಮತ್ತು ಲಾಠೀವರಸೆಯಲ್ಲಿ ನಿಪುಣರು. ತಬಲಾ ಬಾರಿಸುವುದರಲ್ಲಿ ಹೆಸರುವಾಸಿಯಾಗಿದ್ದರು. ಮರ್ಚೆಂಟ್ ಆಫ್ ವೆನಿಸ್, ಜ್ಯೂಲಿಯಸ್ ಸೀಸರ್, ಹ್ಯಾಮ್‌ಲೆಟ್ ಮುಂತಾದ ನಾಟಕಗಳ ಹಲವು

ಅಂಶಗಳು ಬಾಯಿಪಾಠವಾಗಿದ್ದುವು. ಮೆಕಾಲೆಯ ಇಂಗ್ಲಿಷು ಅವರ ಆದರ್ಶವಾಗಿತ್ತು. ಬರ್ಕನ ವಾಗ್ಮಿತೆಯಲ್ಲಿ ಮುಗ್ಧರಾಗಿದ್ದರು. ಬಂಗಾಳಿಯಲ್ಲಿ ಅವರ ಶ್ರದ್ಧೆಯು ಎಲ್ಲೆ "ಮೇಘನಾಧ ವಧೆ" ಕಾವ್ಯದ ವರೆಗೂ ಇತ್ತು. ಮಧ್ಯ ವಯಸ್ಸಿನಲ್ಲಿ ಮದ್ಯ ಮತ್ತು ನಿಷಿದ್ಧ ಭೋಜನವನ್ನು ಆಧುನಿಕ ಚಿತ್ತಕ್ಕೆ ಉಲ್ಲಾಸ ಕೊಡುವ ವಸ್ತುಗಳೆಂದು ಎಣಿಸಿದ್ದರು. ಮುಪ್ಪಿನಲ್ಲಿ ಬಿಟ್ಟುಬಿಟ್ಟಿದ್ದರು. ಅವರ ಉಡಿಗೆ ತೊಡಿಗೆಯಲ್ಲಿ ಕುಶಲತೆಯಿತ್ತು. ಮುಖದ ಲಕ್ಷಣ ಸುಂದರವೂ ಗಂಭೀರವೂ ಆಗಿತ್ತು. ದೇಹ ದೀರ್ಘವೂ ಬಲಿಷ್ಠವೂ ಆಗಿತ್ತು. ಜನರೊಡನೆ ಕಲೆಯುವ ಸ್ವಭಾವ; ಬೇಡುವವರು ಯಾರೇ ಇರಲಿ, ಅವರ ಬೆನ್ನುಹತ್ತಿದಲ್ಲಿ "ಇಲ್ಲ" ಎನ್ನುವವರಲ್ಲ. ಪೂಜೆ ಅರ್ಜನೆಗಳಲ್ಲಿ ನಿಷ್ಠೆಯಿರಲಿಲ್ಲ. ಆದರೂ ಅವು ಆಡಂಬರದಿಂದ ಅವರ ಮನೆಯಲ್ಲಿ ನಡೆಯುತ್ತಿದ್ದವು. ಆ ಆಡಂಬರವು ಕುಲಮರ್ಯಾದೆಯನ್ನು ಪ್ರಕಾಶಿಸುತ್ತಿತ್ತು. ಪೂಜೆ ಹೆಣ್ಣುಮಕ್ಕಳ ಮತ್ತು ಇತರರ ಭಾಗಕ್ಕೆ ಸೇರುತ್ತಿತ್ತು. ಆಶಿಸಿದ್ದರೆ ಅನಾಯಾಸವಾಗಿ "ರಾಜ" ಎಂಬ ಬಿರುದು ಪಡೆಯುತ್ತಿದ್ದರು. ಉದಾಸೀನತೆಯ ಕಾರಣವನ್ನು ವಿಚಾರಿಸಿದರೆ ರಾಜಾರಾಮ ಬಾಬುಗಳು ನಗುತ್ತ "ತಂದೆಯವರು ಕೊಟ್ಟು ಹೋಗಿರುವ ರಾಜಸಂಪತ್ತಿಯನ್ನು ಅನುಭವಿಸುತ್ತಿರುವೆನು. ಅದರ ಮೇಲೆ ಬೇರೆ ಬಿರುದಿಗೆ ಸ್ಥಳ ಕೊಟ್ಟರೆ ಮರ್ಯಾದೆಗೆ ಕುಂದುಂಟಾಗುವುದು" ಎನ್ನುವರು. ಗವರ್ನರ್ಮೆಂಟ್ ಹೌಸಿನಲ್ಲಿ ಅವರಿಗೆ ಖಾಸಗೀ ಬಾಗಿಲಿಂದ ಮರ್ಯಾದೆಯೊಡನೆ ಪ್ರವೇಶವಿತ್ತು. ಆಳುವವರ ಪ್ರತಿನಿಧಿಗಳಾದ ಅಧಿಕಾರಿ ವರ್ಗದವರು ಅವರ ಮನೆಯಲ್ಲಿ ಚಿರಕಾಲದಿಂದ ಪದ್ಧತಿಯಲ್ಲಿದ್ದ ಜಗದ್ಧಾತ್ರಿ ಪೂಜೆಯಲ್ಲಿ ಷ್ಯಾಂಪೇನ್ ಪ್ರಸಾದವನ್ನು ಭಾರೀ ಪ್ರಮಾಣದಲ್ಲೇ ಹೊಟ್ಟೆಯೊಳಗೆ ಸೇರಿಸುತ್ತಿದ್ದರು.

ಶರ್ಮಿಳೆಯ ವಿವಾಹದ ನಂತರ ಹೆಂಡತಿಯಿಲ್ಲದ ಅವರ ಮನೆಯಲ್ಲಿ ಹಿರಿಯಮಗ ಹೇಮಂತನೂ ಕಿರಿಯ ಮಗಳು ಊರ್ಮಿಳಾಮಾಲೆಯೂ ಇದ್ದರು. ಅಧ್ಯಾಪಕ ವರ್ಗ ಹುಡುಗನನ್ನು ಇಂಗ್ಲೀಷಿನಲ್ಲಿ ಬ್ರಿಲಿಯಂಟ ಎಂಬರ್ಥದಲ್ಲಿ ದೀಪ್ತಿಮಾನ ಎನ್ನುತ್ತಿದ್ದರು. ಅವನ ಮುಖದ ಲಕ್ಷಣ ಮತ್ತೆ ಮತ್ತೆ ನೋಡುವ ಹಾಗಿತ್ತು. ಪರೀಕ್ಷೆಯ ಅಳತೆಗೋಲಿನಲ್ಲಿ ಮೇಲಿನ ಗೆರೆಯನ್ನು ಮುಟ್ಟುವ ವಿಷಯವೇ ಅವನಿಗಿರಲಿಲ್ಲ. ಅಂಗನಾಥನೆಯಲ್ಲಿ ಅಪ್ಪನ ಹೆಸರನ್ನು ಉಳಿಸುವನೆಂದು ಹೇಳಲು ಅನುಮಾನಕ್ಕೆ ಕಾರಣವೇ ಇರಲಿಲ್ಲ. ಅವನ ನಾಲ್ಕು ದಿಕ್ಕಿನಲ್ಲೂ ಹೆಣ್ಣುಗಳ ಕಡೆಯವರು ಪ್ರದಕ್ಷಿಣೆ ಮಾಡುತ್ತಿದ್ದರೆಂಬ ಅಂಶ

ಹೇಳಬೇಕಾಗಿಯೇ ಇಲ್ಲ. ಆದರೆ ಅವನ ಮನಸ್ಸಿನಲ್ಲಿ ಮದುವೆಯ ವಿಷಯ ವಾಗಿ ಇನ್ನೂ ಉದಾಸೀನತೆಯಿತ್ತು. ಯುರೋಪಿನ ವಿಶ್ವವಿದ್ಯಾಲಯದ ಪದವೀಧರನಾಗಬೇಕೆಂಬ ಗುರಿಯಿತ್ತು. ಆ ಉದ್ದೇಶವನ್ನು ಮನಸ್ಸಿನಲ್ಲಿಟ್ಟು ಕೊಂಡು ಫ್ರೆಂಚ್ ಮತ್ತು ಜರ್ಮನ್ ಭಾಷೆಗಳನ್ನು ಕಲಿಯುತ್ತಿದ್ದನು.

ಯಾವ ವೃತ್ತಿಯನ್ನಾದರೂ ಅವಲಂಬಿಸುವುದು ಅನಾವಶ್ಯಕವೆಂದು ತಿಳಿದು ನ್ಯಾಯಶಾಸ್ತ್ರ ಅಭ್ಯಾಸ ಮಾಡತೊಡಗಿದ ಕಾಲದಲ್ಲಿ ಹೇಮಂತನ ಯಕೃತ್ತಿನಲ್ಲೋ ಶರೀರದ ಮತ್ತಾವ ಅಂಗದಲ್ಲೋ ಯಾವುದೋ ವಿಕಾರ ಘಟಿಸಿ ಡಾಕ್ಟರುಗಳಿಗೆ ಅದರ ಮೂಲವೇ ಅರಿವಾಗಲಿಲ್ಲ. ಗುಟ್ಟಾಗಿ ಮುಂದುವರಿಯುತ್ತಿದ್ದ ವ್ಯಾಧಿ ಬಲಿಷ್ಠವಾದ ವೈರಿಯಲ್ಲಿ ಕೋಟೆಯೊಳಗೆ ಆಶ್ರಯ ಪಡೆದಂತೆ ಇತ್ತು. ಅದನ್ನು ಗೊತ್ತುಹಚ್ಚುವುದು ಎಷ್ಟು ಕಠಿಣವೋ ಅದನ್ನು ಆಕ್ರಮಣ ಮಾಡುವುದೂ ಅಷ್ಟೇ ಅಸಾಧ್ಯವಾಗಿತ್ತು. ಹಳೆಯ ಕಾಲದ ಆಂಗ್ಲ ಡಾಕ್ಟರರೊಬ್ಬರಲ್ಲಿ ರಾಜಾರಾಮಬಾಬುಗಳಿಗೆ ಅಪಾರ ನಂಬಿಕೆ ಇತ್ತು. ಆತ ಶಸ್ತ್ರಚಿಕಿತ್ಸೆಯಲ್ಲಿ ಹೆಸರು ಗಳಿಸಿದವರು. ರೋಗಿಯ ಪರೀಕ್ಷೆಗೆ ಆರಂಭಿಸಿದರು. ಶಸ್ತ್ರ ವ್ಯವಹಾರದ ಅಭ್ಯಾಸಬಲದಿಂದ ವೈರಿಯ ಮರ್ಗವು ಅಂತರಾಳದಲ್ಲಿ ಕೇಡು ಬೇರೂರಿದೆ. ಅದನ್ನು ನಿರ್ಮೂಲ ಮಾಡು ವುದು ಆವಶ್ಯಕವೆಂದು ನಿರ್ಣಯಿಸಿದರು. ಶಸ್ತ್ರದ ಕೌಶಲ್ಯಪೂರ್ಣ ಸಂಚಾ ಲನದಿಂದ ಯಾವ ಭಾಗವನ್ನು ಭೇದಿಸಿದರೋ ಅಲ್ಲಿ ಕಲ್ಪಿತ ಶತ್ರುವೂ ಇರ ಲಿಲ್ಲ. ಶತ್ರುವಿನ ಅತ್ಯಾಚಾರದ ಚಿಹ್ನೆಯೂ ಕಾಣಲಿಲ್ಲ. ತಪ್ಪು ತಿದ್ದಿ ಕೊಳ್ಳಲು ದಾರಿಯಿರಲಿಲ್ಲ. ಹುಡುಗನು ಮೃತನಾದನು. ಅಪ್ಪನ ಮನಸ್ಸಿನ ಅಪಾರ ದುಃಖ ಯಾವ ವಿಧದಲ್ಲೂ ಶಾಂತವಾಗದು. ಸಾವು ಆತನಿಗೆ ಅಷ್ಟು ದುಃಖವನ್ನುಂಟುಮಾಡಲಿಲ್ಲ. ಇಂತಹ ಸುಂದರ ಬಲಿಷ್ಠ ದೇಹವನ್ನು ಹೀಗೆ ಕೊಯ್ದು ತುಂಡು ಮಾಡಿದುದರ ನೆನಪು ರಾತ್ರಿಹಗಲೂ ರಣಹದ್ದಿನ ತೀಕ್ಷ್ಣವಾದ ಉಗುರುಗಳಂತೆ ಅವರ ಹೃದಯವನ್ನು ಬಗೆಯುತ್ತಿತ್ತು. ಈ ನೋವು ಅವರನ್ನು ಮರಣದೆಡೆಗೆ ಎಳೆದುಕೊಂಡು ಹೋಯಿತು.

ಹೊಸದಾಗಿ ಪಾಸ್ ಮಾಡಿದ ಡಾಕ್ಟರು ಹೇಮಂತನ ಹಳೆಯ ಸಹ ಪಾಠಿ ನೀರದ ಮುಖರ್ಜಿ ಶುಶ್ರೂಷೆಯ ಸಹಾಯತೆಯ ಕೆಲಸದಲ್ಲಿದ್ದನು. ತಪ್ಪಾಗುತ್ತಿದೆಯೆಂದು ಅವನು ಮೊದಲಿನಿಂದಲೂ ಹೇಳುತ್ತಲೇ ಇದ್ದನು. ಅವನು ರೋಗವನ್ನು ಗುರ್ತಿಸಿ ಅದರ ಸ್ವರೂಪ ನಿರ್ಣಯಿಸಿದ್ದನು. ದೀರ್ಘ ಕಾಲ ಹವೆ ಬದಲಾಯಿಸಿ ಎತ್ತರವಾದ ತೇವವಿಲ್ಲದ ಪ್ರದೇಶದಲ್ಲಿ ವಾಸಿಸ

ಬೇಕೆಂದು ತಿಳಿಸಿದ್ದನು ಆದರೆ ರಾಜಾರಾಮರ ಮನಸ್ಸಿನಲ್ಲಿ ಅವರ ಪೂರ್ವಿಕರ ಕಾಲದ ಸಂಸ್ಕಾರ ಬೇರೂರಿತ್ತು. ಯಮುನ ಸಂಗಡ ಬಲವಾಗಿ ಕಾದಾಡಲು ತಕ್ಕ ಎದುರಾಳಿ ಆಂಗ್ಲ ಡಾಕ್ಟರನೆಂದು ಅವರ ಅರಿವು. ಈ ಸಂಭವದಿಂದ ನೀರದನ ಮೇಲೆ ಅವರಿಗೆ ಹದ್ದು ಮೀರಿದ ಪ್ರೀತಿಯುಂಟಾಯಿತು. ಅವರ ಕಿರಿಯ ಮಗಳು ಊರ್ಮಿಯ ಮನದಲ್ಲಿ ಈ ಮನುಷ್ಯನ ಪ್ರತಿಭೆ ಅಸಾಮಾನ್ಯವೆಂದು ಅಕಸ್ಮಾತ್ತಾಗಿ ಅರಿವಾಯಿತು. ತಂದೆಯೊಡನೆ "ಅಪ್ಪ- ನೋಡು. ಸ್ವಲ್ಪ ವಯಸ್ಸಾದರೂ ಎಷ್ಟು ಆತ್ಮವಿಶ್ವಾಸವಿದೆ. ಅಷ್ಟು ದೊಡ್ಡ ಆಕಾರದ ವಿಲಾಯತಿ ಡಾಕ್ಟರರ ಅಭಿಪ್ರಾಯದ ವಿರುದ್ಧವಾಗಿ ಸಂಕೋಚವಿಲ್ಲದೆ ತನ್ನ ಅಭಿಪ್ರಾಯ ನಿಸ್ಸಂಶಯವಾಗಿ ತಿಳಿಸುವ ಸಾಹಸ ಎಷ್ಟರಮಟ್ಟಿನದು" ಎಂದಳು

"ವೈದ್ಯವಿದ್ಯೆ ಕೇವಲ ಶಾಸ್ತ್ರಗತವಲ್ಲ. ಒಬ್ಬೊಬ್ಬರಲ್ಲಿ ಅದರ ದುರ್ಲಭ ದೈವಸಂಸ್ಕಾರ ನೆಲೆಸಿರುವುದು. ನೀರದನಲ್ಲಿ ಅದು ಕಾಣುತ್ತಿದೆ" ಎಂದು ಅಪ್ಪ ಉತ್ತರ ಕೊಟ್ಟರು.

ಶೋಕದ ಆಘಾತದಿಂದ, ಪರಿತಾಪದ ವೇದನೆಯಿಂದ ಇವರುಗಳ ಭಕ್ತಿ ಒಂದು ಸಣ್ಣ ಅಳತೆಯಲ್ಲಿ ಆರಂಭವಾಯಿತು. ಅನಂತರ ಪ್ರಮಾಣವನ್ನು ಆಶಿಸದೇ ಅದು ತಾನೇ ಬೆಳೆಯುತ್ತ ಮುಂದುವರಿಯಿತು.

ರಾಜಾರಾಮ ಬಾಬುಗಳು ಒಂದು ದಿನ ಮಗಳೊಡನೆ ಹೇಳಿದರು, "ನೋಡು ಊರ್ಮಿ, 'ಮಾನವರ ರೋಗತಾಪಗಳನ್ನು ದೂರಗೊಳಿಸು' ಎಂದು ಹೇಮಂತನು ಕೂಗುತ್ತಿರುವಂತೆ ನನಗೆ ಕೇಳುತ್ತಿದೆ. ಅವನ ಆಸ್ಪತ್ರೆಯೊಂದನ್ನು ಸ್ಥಾಪಿಸಲು ನಿಶ್ಚಯಿಸಿರುವೆನು."

ತನ್ನ ಸ್ವಭಾವಸಿದ್ಧ ಉತ್ಸಾಹದಿಂದ ಉಬ್ಬಿದವಳಾಗಿ ಊರ್ಮಿಯು "ಬಹು ಒಳ್ಳೆಯದು. ನನ್ನನ್ನು ಯುರೋಪಿಗೆ ಕಳಿಸಿ ಬಿಡು. ಡಾಕ್ಟರಿ ಕಲಿತು ಹಿಂದಿರುಗಿ ಆಸ್ಪತ್ರೆಯ ಹೊಣೆ ವಹಿಸಿಕೊಳ್ಳಲು ಸಾಧ್ಯವಾಗಲಿ" ಎಂದಳು.

ಮಾತು ರಾಜಾರಾಮರ ಎದೆಯನ್ನು ತಾಕಿತು. " ಆ ಆಸ್ಪತ್ರೆ ದೇವತ್ವವಾಗುವದು. ನೀನು ಅದರ ಧರ್ಮದರ್ಶಿನಿಯಾಗುವೆ. ಹೇಮಂತನು ಬಹು ದುಃಖಪಟ್ಟು ಹೋದನು. ಅವನು ನಿನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ನಿನ್ನ .ಈ ಪುಣ್ಯಕಾರ್ಯದಿಂದ ಪರಲೋಕದಲ್ಲಿ ಅವನು ಶಾಂತಿ ಪಡೆಯುವನು. ಅವನ ರುಗ್ಣಶಯ್ಯೆಯಲ್ಲಿ ರಾತ್ರಿಹಗಲೂ ನೀನು ಸೇವೆ ಮಾಡಿದೆ. ಆ

ಸೇವೆಯೇ ನಿನ್ನ ಕೈಯಲ್ಲಿ ಇನ್ನೂ ದೊಡ್ಡದಾಗಿ ಬೆಳೆಯುವುದು" ಎಂದರು. ಅಭಿಜಾತ ವರ್ಗದ ಮನೆಯಲ್ಲಿ ಹುಟ್ಟಿದ ಹೆಣ್ಣು ಡಾಕ್ಟರಿ ಕೆಲಸ ಮಾಡುವುದು ಸಾಧ್ಯವೇ ಇಲ್ಲವೇ ಎಂಬುದೂ ಆ ಮುದುಕನ ಮನಸ್ಸಿನಲ್ಲಿ ತೋರಲಿಲ್ಲ. ರೋಗದ ದವಡೆಯಿಂದ ಮಾನವರನ್ನು ಉಳಿಸಬೇಕೆಂಬ ಅರಿವು ಎಷ್ಟಿರ ಬೇಕೋ ಅಷ್ಟು ಆತನ ಹೃದಯದಲ್ಲಿ ನೆಲಸಿತ್ತು. ಆತನ ಮಗ ಬದುಕ ಲಿಲ್ಲ ಆದರೆ ಹೆರವರ ಮಕ್ಕಳು ಬದುಕಿದುದಾದರೆ ಆತನ ನಷ್ಟ ಭರ್ತಿಯಾ ಗುವುದು. ಆತನ ದುಃಖ ಹಗುರವಾಗುವುದು ಸಾಧ್ಯ. "ಇಲ್ಲಿಯ ವಿಶ್ವ ವಿದ್ಯಾಲದಲ್ಲಿ ವಿಜ್ಞಾನದ ಶಿಕ್ಷಣ ಮುಂಚೆ ತೀರಲಿ. ಅನಂತರ ಯುರೋಪಿಗೆ ಹೊರಡುವೆಯಂತೆ" ಎಂದು ಮಗಳೊಡನೆ ಹೇಳಿದರು.

ಅಂದಿನಿಂದ ರಾಜಾರಾಮರ ಮನದಲ್ಲಿ ಒಂದು ಸಂಗತಿ ಸುತ್ತಿ ಸುತ್ತಿ ತಲೆದೋರುತ್ತಿತ್ತು. ಅದು ಆ ಹುಡುಗ ನೀರದನ ವಿಷಯ. ಚಿನ್ನದಂತಹ ಹುಡುಗ. ನೋಡಿದಷ್ಟೂ ಸಂತೋಷವಾಗುವಂತಹವನು. ಪಾಸನ್ನೇನೋ ಮಾಡಿರುವ. ಆದರೆ ಪರೀಕ್ಷೆಯ ವಿಶಾಲ ಪ್ರದೇಶವನ್ನು ದಾಟಿ ಡಾಕ್ಟರೀ ಸಪ್ತಸಮುದ್ರಗಳಲ್ಲಿ ಹಗಲುರಾತ್ರಿ ಈಜುತ್ತಿರುವನು. ವಿದ್ಯೆಯು ವಯಸ್ಸು ಕಿರಿ ದಾದರೂ ಆಮೋದ ಪ್ರಮೋದದಲ್ಲಿ ಎಳ್ಳಷ್ಟೂ ಮನಸ್ಸಿಲ್ಲ. ಹೊಸ ಹೊಸ ಸಂಶೋಧನೆಗಳೇನೇನು ಇವೆಯೋ ಅವನ್ನೇ ತಿರುವಿ ತಿರುವಿ ಪರೀಕ್ಷಿಸುವನು. ತನ್ನ ಕೀರ್ತಿಗೆ ಹಾನಿ ತರುವನು. ಕೀರ್ತಿ ಗಳಿಸಿರುವವರನ್ನು ಅತ್ಯಂತ ಅವಜ್ಞೆಯಿಂದ ಕಾಣುವನು. "ಮೂರ್ಖರು ಕೀರ್ತಿ ಗಳಿಸುವರು. ಬುದ್ಧಿ ಶಾಲಿಗಳು ಗೌರವ ಸಂಪಾದಿಸುವರು" ಎಂದು ಹೇಳುವನು. ಈ ಮಾತು ಗಳನ್ನು ಯಾವುದೋ ಪುಸ್ತಕದಿಂದ ಸಂಗ್ರಹಿಸಿದ್ದ.

ಕೊನೆಗೆ ಒಂದು ದಿನ ರಾಜಾರಾಮ ಬಾಬುಗಳು ಊರ್ಮಿಯೊಡನೆ ಹೇಳಿದರು: "ಯೋಚಿಸಿ ನೋಡಿದೆ. ನಮ್ಮ ಆಸ್ಪತ್ರೆಯಲ್ಲಿ ನೀನು ನೀರದನ ಸಂಗಾತಿನಿಯಾಗಿ ಕೆಲಸ ಮಾಡಿದರೇನೇ ಕೆಲಸ ಸಂಪೂರ್ಣವಾಗುವುದು. ನಾನೂ ನಿಶ್ಚಿಂತನಾಗಿರಲು ಸಾಧ್ಯ. ಅವನಂತಹ ಹುಡುಗ ಸಿಕ್ಕುವುದೆಲ್ಲಿ?"

ರಾಜಾರಾಮ ಬಾಬುಗಳು ಯಾವುದನ್ನಾದರೂ ಮಾಡಿಯಾರು. ಹೇಮಂತನ ಅಭಿಪ್ರಾಯವನ್ನು ಅಗ್ರಾಹ್ಯ ಮಾಡಲಾರರು ಅವರು ಹುಡುಗಿ ಯರ ಅಭಿಪ್ರಾಯವನ್ನು ಉಲ್ಲಂಘಿಸಿ ತಂದೆತಾಯಿಯರ ಇಷ್ಟದಂತೆ ಮದುವೆ ಮಾಡುವುದು ಅನಾಗರಿಕತೆ' ಎಂದು ಅವನು ಹೇಳುತ್ತಿದ್ದ. "ಮದುವೆ ಕೇವಲ ಇಚ್ಛೆಯ ಮೂಲಕವಷ್ಟೇ ಅಲ್ಲ. ಅನುಭವದ ಸಹಾಯವೂ

ಆವಶ್ಯಕ" ಎಂದು ರಾಜಾರಾಮರು ಒಮ್ಮೆ ತರ್ಕ ನಡೆಸಿದ್ದರು. ವಾದವೇನೇ ಇರಲಿ, ಅಭಿರುಚಿ ಏನೇ ಇರಲಿ ಹೇಮಂತನಲ್ಲಿ ಅವರ ಪ್ರೀತಿ ಎಷ್ಟೆಂದರೆ ಅವನ ಇಚ್ಛೆಯೇ ಈ ಕುಟುಂಬದಲ್ಲಿ ಜಯ ಪಡೆಯಿತು.

ನೀರದ ಮುಖರ್ಜಿ ಈ ಮನೆಯಲ್ಲಿ ಧಾರಾಳವಾಗಿ ಹೋಗಿಬರುತ್ತಿದ್ದನು. ಹೇಮಂತನು ಅವನಿಗೆ 'ಫಾಸಿಲ್' ಅರ್ಥಾತ್ ಗಾರಿಬಂಡೆಯೊಂದು ಹೆಸರಿಟ್ಟಿದ್ದನು. ಅರ್ಥ ಹೇಳುತ್ತ "ಈ ಮನುಷ್ಯ ಪುರಾಣ ಕಾಲದವ. 'ಮೈಥ್‌ಲಾಜಿಕಲ್' ವ್ಯಕ್ತಿ. ಅವನಿಗೆ ವಯಸ್ಸೇ ಇಲ್ಲ ಕೇವಲ ವಿದ್ಯೆ ಮಾತ್ರ ಇದೆ. ಆದ್ದರಿಂದಲೇ ಅವನನ್ನು ನಾನು ಮಿನರ್ವಾನ ವಾಹನ ವೆನ್ನುವೆನು" ಎಂದು ಅವನು ಹೇಳುತ್ತಿದ್ದ.

ನೀರದನು ಇವರ ಮನೆಯಲ್ಲಿ ಆಗಾಗ್ಗೆ ಚಹಾ ಕುಡಿಯಲು ಬರುವನು. ಹೇಮಂತನೊಡನೆ ತುಮುಲ ತರ್ಕ ನಡೆಸುವನು. ನಿಜವಾಗಿ ಮನಸ್ಸಿನ ಒಳಗೊಳಗೆ ಊರ್ಮಿಯನ್ನು ಉದ್ದೇಶಿಸಿಯೇ ಬರುವನು. ಆದರೆ ವ್ಯವಹಾರದಲ್ಲಿ ಅದನ್ನು ತೋರಿಸುತ್ತಿರಲಿಲ್ಲ. ಕಾರಣವೇನೆಂದರೆ ಈ ಕ್ಷೇತ್ರದಲ್ಲಿ ಯಥೋಚಿತ ವ್ಯವಹಾರ ನಡೆಸುವ ಸ್ವಭಾವವೇ ಅವನಿಗಿಲ್ಲ. ಅವನು ಆಲೋಚನೆ ಮಾಡಲು ಶಕ್ತ. ಮಾತುಕಥೆ ನಡೆಸಲು ಆಗಲಾರದವ. ಯೌವನದ ಉತ್ತಾಪವೇನೋ ಅವನಲ್ಲಿತ್ತು. ಆದರೆ ಅದರ ಪ್ರಕಾಶವಿರಲಿಲ್ಲ. ಈ ಕಾರಣದಿಂದಲೇ ಯೌವನ ಯಥೇಷ್ಟವಾಗಿ ಪ್ರಕಾಶವಾಗಿದ್ದ ಯುವಕರನ್ನು ಅಲ್ಲಗಳೆದೇ ಅವನು ತನ್ನನ್ನು ಪ್ರಕಟಿಸಿಕೊಳ್ಳುತ್ತಿದ್ದನು. ಈ ಎಲ್ಲ ಕಾರಣಗಳಿಂದ ಅವನನ್ನು 'ಊರ್ಮಿಯ ಕೈ'ಯ ಉಮೇದುವಾರರಲ್ಲಿ ಎಣಿಸಲು ಯಾರಿಗೂ ಧೈರ್ಯವಿರಲಿಲ್ಲ.

ಆದರೂ ಆ ಸ್ಪಷ್ಟ ನಿರಾಸಕ್ತಿಯೇ ವರ್ತಮಾನ ಕಾರಣದೊಡನೆ ಬೆರೆತ ಅವನ ಮೇಲೆ ಊರ್ಮಿಯ ಶ್ರದ್ಧೆಯನ್ನು ಎಲ್ಲಿಯ ತನಕ ತೆಗೆದುಕೊಂಡು ಹೋಯಿತು

ರಾಜಾರಾಮ ಬಾಬುಗಳು ಮಗಳ ಮನಸ್ಸಿನಲ್ಲಿ ಏನೂ ಆಕ್ಷೇಪಣೆ ಇಲ್ಲವಾದರೆ ನೀರದನೊಡನೆ ಅವಳು ಮದುವೆ ಆಗುವುದಾದರೆ ತಾವು ಸಂತಸಗೊಳ್ಳುವುದಾಗಿ ಸ್ಪಷ್ಟವಾಗಿ ಯಾವಾಗ ಹೇಳಿದರೋ ಆವಾಗ ಹುಡುಗಿ ಒಪ್ಪಿಗೆ ಸೂಚಿಸುವಂತೆ ತಲೆ ಆಡಿಸಿದಳು; ಅದರ ಸಂಗಡಲೇ ಈ ದೇಶದ ಮತ್ತು ವಿಲಾಯತಿಯ ವಿದ್ಯಾಭ್ಯಾಸದ ಸರದಿ ತೀರಿದ ಮೇಲೆಯೇ ಮದುವೆ

ಯೆಂಬ ಸಂಗತಿಯನ್ನೂ ತಿಳಿಸಿದಳು "ತಂದೆ ಒಳ್ಳೆಯದು. ಆದರೆ ಪರಸ್ಪರ ಒಪ್ಪಿಗೆಯಿಂದ ಸಂಬಂಧ ಖಂಡಿತವಾದರೆ ಮತ್ತೆ ಯೋಚನೆ ಮಾಡಬೇಕಾದು ದೇನೂ ಇರದು" ಎಂದರು.

ನೀರದನ ಸಮ್ಮತಿ ಪಡೆಯಲು ವಿಳಂಬವಾಗಲಿಲ್ಲ. ಅವನ ಭಾವಭಂಗಿ ಯಲ್ಲಿ ಮಾತ್ರ ಮದುವೆಯೆಂದರೆ ವೈಜ್ಞಾನಿಕರಿಗೆ ತ್ಯಾಗಸ್ವೀಕಾರ ಅಥವಾ ಆತ್ಮಹತ್ಯೆಯ ಹತ್ತಿರ ಹತ್ತಿರ ಎಂದನ್ನುವಂತೆ ಕಾಣುತ್ತಿತ್ತು. ಈ ದುರ್ಯೋ ಗದ ಅಲ್ಪಸ್ವಲ್ಪ ಉಪಶಮನಕ್ಕಾಗಿಯೋ ಏನೋ ವಿದ್ಯೆ ಮತ್ತು ಇತರ ಎಲ್ಲ ವಿಷಯಗಳಿಗೂ ತಾನೇ ಊರ್ಮಿಯ ಸಂಚಾಲಕನಾಗಿರುವುದಾಗಿ ಅರ್ಥಾತ್ ಮುಂದೆ ಹೆಂಡತಿ ಆಗಲಿರುವುದರಿಂದ ಅವಳನ್ನು ಮೆಲ್ಲ ಮೆಲ್ಲನೆ ತನ್ನ ಕೈ ಯಿಂದಲೇ ತಿದ್ದಬೇಕೆಂಬ ನಿಯಮವೊಂದನ್ನು ತಿಳಿಸಿದನು. ಈ ಕೆಲಸವೂ ವೈಜ್ಞಾನಿಕ ರೀತಿಯಲ್ಲಿ ದೃಢವಾದ ನೇಮದಿಂದ ಪ್ರಯೋಗ ಶಾಲೆಯ ಸಂಪ್ರ ದಾಯ ಬದ್ಧವಾದ ಪ್ರಕ್ರಿಯೆಯಂತೆ ನಡೆಯತಕ್ಕದ್ದೆಂದು ತಿಳಿಸಿದನು.

ನೀರದನು ಊರ್ಮಿಯೊಡನೆ "ಪಶುಪಕ್ಷಿಗಳು ಪ್ರಕೃತಿಯ ಕಾರಖಾನೆ ಯಿಂದ ಪೂರ್ಣ ರೂಪದಲ್ಲಿ ಹೊರಬೀಳುವವು. ಆದರೆ ಮನುಷ್ಯ ಸಂಪೂರ್ಣ ಹಸಿಯ ಪದಾರ್ಥವಾಗಿ ಹೊರಬೀಳುವನು. ತನ್ನನ್ನು ತಿದ್ದಿಕೊಳ್ಳುವ ಹೊಣೆ ಮನುಷ್ಯನ ಮೇಲೆಯೇ ಇದೆ" ಎಂದು ಹೇಳಿದನು.

ಊರ್ಮಿ ನಮ್ರಭಾವದಿಂದ "ಸರಿ. ಪರೀಕ್ಷಿಸಿ ನೋಡಿ. ಅಡ್ಡಿಯಾಗದು" ಎಂದಳು ನೀರದನು ಹೇಳಿದನು: "ನಿನ್ನಲ್ಲಿ ನಾನಾ ವಿಧವಾದ ಶಕ್ತಿ ಇದೆ. ನಿನ್ನ ಬಾಳುವೆಯ ಏಕಮಾತ್ರ ಗುರಿಯ ನಾಲ್ಕು ದಿಕ್ಕಿನಲ್ಲೂ ಅವನ್ನು ಕಟ್ಟಿ ನಿಲ್ಲಿಸಬೇಕು. ಆದಾದರೇನೆ ನಿನ್ನ ಬಾಳುವೆ ಸಾರ್ಥಕವಾದೀತು. ಒಂದು ಅಭಿಪ್ರಾಯದ ಎಳೆತದಿಂದ ವಿಕ್ಷಿಪ್ತವಾದುದನ್ನು ಸಂಕ್ಷಿಪ್ತಗೊಳಿಸಬೇಕು. ಆಗ ಬಿಗಿ ಬರುವುದು ಡೈನಾಮಿಕ್ ಆದೀತು. ಆಗಲೀಗ ಆ ಐಕ್ಯತ್ವಕ್ಕೆ 'ಮಾರಲ್ ಆರ್ಗಾನಿಜಮ್' ಎಂದು ಹೇಳಲು ಸಾಧ್ಯವಾದೀತು."

ಊರ್ಮಿ ಪುಳಕಿತಳಾಗಿ ಯೋಚಿಸಿದಳು. ಅನೇಕ ಯುವಕರು ಅವರ ಮನೆಯ ಟಿ-ಟೇಬಲ್ಲಿನಲ್ಲಿ ಟೆನಿಸ್ ಕೋರ್ಟಿನಲ್ಲಿ ಬರುವರು. ಆದರೆ ಆಲೋಚಿಸಲು ಯೋಗ್ಯವಾದ ಮಾತನ್ನು ಅವರುಗಳು ಎಂದೂ ಹೇಳರು. ಯಾರಾದರು ಹೇಳಿದರೆ ನಿಟ್ಟುಸಿರು ಬಿಡುವರು. ವಾಸ್ತವವಾಗಿ ಅತ್ಯಂತ ಗಂಭೀರ ಭಾವದಿಂದ ಮಾತನಾಡುವ ಪದ್ಧತಿ ನೀರದ ಒಬ್ಬನಲ್ಲಿಯೇ. ಅವನು

ಯಾವುದನ್ನೇ ಹೇಳಲಿ ಅದರಲ್ಲಿ ಏನೋ ಆಶ್ಚರ್ಯಕರವಾದ ಅರ್ಥವಿದೆ, ಅತ್ಯಂತ ಹೆಚ್ಚಾದ ಇನ್‌ಟಲೆಕ್ಚುಯಲ್ ಎಂದು ಊರ್ಮಿಗೆ ಅನಿಸುವುದು

ರಾಜಾರಾಮಬಾಬುಗಳು ತಮ್ಮ ಹಿರಿಯ ಅಳಿಯನನ್ನೂ ಕರೆದರು. ಆಗಾಗ್ಗೆ ಔತಣದ ಉದ್ದೇಶದಲ್ಲಿ ಅವರಿಬ್ಬರಲ್ಲಿ ಚನ್ನಾಗಿ ಪರಿಚಯ ಉಂಟು ಮಾಡಬೇಕೆಂದು ಯತ್ನಿಸುವರು. ಶಶಾಂಕನು ಶರ್ಮಿಳೆಯೊಡನೆ "ಹುಡುಗ! ಮಹಾ ಅಧಿಕ ಪ್ರಸಂಗಿ ಅವನು. ನಾವೆಲ್ಲ ಅವನ ವಿದ್ಯಾರ್ಥಿಗಳು, ಅದೂ ಕೊನೆಯ ಬೆಂಚಿನ ಕೊನೆಯಲ್ಲಿರುವವರು ಎಂದು ಅವನ ಎಣಿಕೆ" ಎನ್ನುವನು.

ಶರ್ಮಿಳೆ ನಗುತ್ತ "ಅದು ಹೊಟ್ಟೆಯುರಿ. ಯಾಕೆ? ನಾವೆಲ್ಲ ಅವನಿಗೆ ತೃಪ್ತಿಯಾಗಿರುವೆವಲ್ಲ" ಎಂದಳು.

ಶಶಾಂಕನು "ತಂಗಿಯೊಡನೆ ಸ್ಥಳ ಬದಲಾಯಿಸಿಕೊಂಡರೆ ಹೇಗಿರುವುದು?" ಎಂದನು. "ಹಾಗಾದರೆ ನೀವೇನಾದರೂ ನಿಸ್ಸಾರರಾಗಿ ಇರುವಿರೇನೋ. ನನ್ನ ಮಾತು ಬೇರೆ" ಎಂದು ಶರ್ಮಿಳೆ ಹೇಳಿದಳು.

ಶಶಾಂಕನ ವಿಷಯವಾಗಿ ನೀರದನಲ್ಲೂ ಭ್ರಾತೃಭಾವ ವೃದ್ಧಿಯಾಗುತ್ತಿದ್ದಂತೆ ಕಾಣಿಸದು. ಅವನು ಮನಸ್ಸಿನಲ್ಲಿ "ಅವನಂತೂ ಕೂಲಿಯವ. ಅವನೇನು ವೈಜ್ಞಾನಿಕನೇ? ಕೈ ಇದೆ. ತಲೆ ಇಲ್ಲ" ಎನ್ನುವನು.

ಶಶಾಂಕನು ನೀರದನ ವಿಷಯವಾಗಿ ನಾದಿನಿಯನ್ನು ಕುಚೇಷ್ಟೆ ಲೇವಡಿ ಮಾಡುವನು. "ಇನ್ನು ಹಳೆಯ ಹೆಸರನ್ನು ಬದಲಾಯಿಸಬೇಕಾದ ಕಾಲ ಬಂದಿತು" ಎಂದನು.

ಊರ್ಮಿ:– "ಇಂಗ್ಲಿಷು ಪದ್ಧತಿಯಂತೆ ?"

ಶಶಾಂಕ:– "ಅಲ್ಲ. ಶುದ್ಧ ಸಂಸ್ಕೃತ ಪದ್ಧತಿಯಲ್ಲಿ"

ಊರ್ಮಿ:– "ಹೊಸ ಹೆಸರೇನೋ ಕೇಳೋಣ?"

ಶಶಾಂಕ: "ವಿದ್ಯುಲ್ಲತಾ. ನೀರದನಿಗೆ ಒಪ್ಪಿಗೆಯಾಗುವುದು. ಪ್ರಯೋಗ ಶಾಲೆಯಲ್ಲಿ ಆ ಪದಾರ್ಥದೊಡನೆ ಪರಿಚಯವಾಗಿದೆ. ಇನ್ನು ಮನೆಯಲ್ಲಿ ಆಗಲಿ."

ಮನಸ್ಸಿನಲ್ಲಿ 'ನಿಜವಾಗಿ ಈ ಹೆಸರು ಇವಳಿಗೆ ಒಪ್ಪತಕ್ಕದ್ದು' ಎಂದು ಅಂದುಕೊಳ್ಳುವನು. ಆದರೂ ಒಳಗೊಳಗೆ ಸ್ವಲ್ಪ ನೋವು ತಗಲುತ್ತಿತ್ತು.

"ಅಯ್ಯೋ ಪಾಪ, ಇಂತಹ ದೊಡ್ಡ ಸ್ವಪ್ರತಿಷ್ಠನ ಕೈಯಲ್ಲಿ ಇಂತಹ ಹುಡುಗಿ ಸೇರುವುದೇ" ಎಂದುಕೊಳ್ಳುವನು. ಯಾರ ಕೈಸೇರಿದರೆ ಶಶಾಂಕನಿಗೆ ಸಂಪೂರ್ಣ ಸಂತೋಷವೂ ಸಮಾಧಾನವೂ ಆದೀತೆಂಬುದನ್ನು ಹೇಳುವುದು ಕಠಿಣವಾದ ವಿಷಯ.

ಕೆಲವು ದಿನಗಳಲ್ಲೇ ರಾಜಾರಾಮರು ಮೃತರಾದರು. ಊರ್ಮಿಯ ಮುಂದಿನ ಯಜಮಾನ ನೀರದನಾಥನು ಏಕಾಗ್ರಮನದಿಂದ ಅವಳನ್ನು ತಿದ್ದುವ ಹೊಣೆ ಹೊತ್ತನು.

ಊರ್ಮಿಮಾಲೆ ಎಷ್ಟು ಚೆನ್ನಾಗಿ ನೋಡುವಳೋ ಅದಕ್ಕೂ ಹೆಚ್ಚು ಅವಳಿಗೆ ತೋರಿಸುವನು. ಅವಳ ಚಂಚಲ ದೇಹದಲ್ಲಿ ಮನಸ್ಸಿನ ಉಜ್ವಲತೆ ಥಳಥಳಿಸುತ್ತಿತ್ತು. ಎಲ್ಲ ವಿಷಯಗಳಲ್ಲೂ ಅವಳಿಗೆ ಉತ್ಸುಕತೆಯಿತ್ತು. ವಿಜ್ಞಾನಶಾಸ್ತ್ರದಲ್ಲಿ ಅವಳಿಗೆಷ್ಟು ಅಭಿರುಚಿಯಿತ್ತೋ ಸಾಹಿತ್ಯದಲ್ಲೂ ಅದಕ್ಕಿಂತ ಹೆಚ್ಚಲ್ಲದೆ ಕಡಿಮೆಯೇನೂ ಇರಲಿಲ್ಲ. ಮೈದಾನದಲ್ಲಿ ಕಾಲ್ಚೆಂಡಿನ ಆಟ ನೋಡಹೋಗಲು ಅವಳಿಗೆ ಮೇರೆಯಿಲ್ಲದ ಉತ್ಸಾಹ. ಸಿನೀಮಾ ನೋಡಲು ಅವಳು ಅಲಕ್ಷ್ಯ ಮಾಡುತ್ತಿರಲಿಲ್ಲ. ಪ್ರೆಸಿಡೆನ್ಸಿ ಕಾಲೇಜಿನಲ್ಲಿ ವಿದೇಶದಿಂದ ಬಂದಿದ್ದ ಭೌತಶಾಸ್ತ್ರಜ್ಞರ ಉಪನ್ಯಾಸಕ್ಕೂ ಅವಳು ಹೋಗುವಳು. ಬೀದಿಯಲ್ಲಿ ಮದುವೆಗಾಗಿ ಬ್ಯಾಂಡಿನೊಡನೆ ಹೋಗುತ್ತಿದ್ದ ವರಪೂಜೆಯ ಮೆರವಣಿಗೆ ಬಂದರಾಯಿತು, ಅವಳು ಓಡಿ ಬಂದು ವರಾಂಡದಲ್ಲಿ ನಿಲ್ಲುವಳು. ಆಗಾಗ್ಗೆ ಮೃಗಾಲಯಕ್ಕೆ ಹೋಗುವುದರಲ್ಲಿ ಅವಳಿಗೆ ಅತ್ಯಾಸಕ್ತಿ. ತಂದೆ ಗಾಳ ಹಾಕಿ ಮೀನು ಹಿಡಿಯುವಾಗ ಪಕ್ಕದಲ್ಲಿ ಕುಳಿತಿರುವಳು. ಟೆನಿಸ್ ಬ್ಯಾಡ್ಮಿಂಟನ್ ಆಟಗಳಲ್ಲಿ ನುರಿತವಳು. ಇವೆಲ್ಲ ಅಣ್ಣನ ಹತ್ತಿರ ಕಲಿತಿದ್ದಳು. ಸಸುಗಾಳಿಗೆ ಅಲುಗುವ ಎಳೆಯ ಬಳ್ಳಿಯಂತೆ ಸದಾ ಚಂಚಲಳು. ಉಡಿಗೆತೊಡಿಗೆಗಳು ಸಹಜವಾಗಿಯೂ ಲಕ್ಷಣವಾಗಿಯೂ ಇರುತ್ತಿದ್ದವು. ಸೀರೆಯನ್ನು ಹೇಗೆ ಎಲ್ಲಿ ಎಳೆಯುವುದು; ಎಲ್ಲಿ ನಿರಿ ಸಿಕ್ಕಿಸುವುದು ಇತ್ಯಾದಿ ವಿಷಯಗಳನ್ನು ಚನ್ನಾಗಿ ಬಲ್ಲಳು. ಚನ್ನಾಗಿ ಹಾಡಲಾರಳು: ಆದರೆ ಲಕ್ಷಣವಾಗಿ ಸಿತಾರ್ ಬಾರಿಸುವಳು. ಆ ಸಂಗೀತ ನೋಡತಕ್ಕದ್ದೋ ಕೇಳತಕ್ಕದ್ದೋ ಯಾರು ಬಲ್ಲರು? ಅವಳ ತುಂಟ ಬೆರಳುಗಳು ಕೋಲಾಹಲ ಮಾಡುತ್ತವೋ ಎನ್ನುವಂತಿತ್ತು. ಮಾತನಾಡಲು ವಿಷಯದ ಅಭಾವ ಎಂದೂ ಘಟಿಸಿದ್ದಿಲ್ಲ ನಗುವುದಕ್ಕೆ ನ್ಯಾಯವಾದ ಕಾರಣವನ್ನು ನಿರೀಕ್ಷಿಸಬೇಕಾಗಿರಲಿಲ್ಲ. ಜೊತೆ

ಸೇರಲು ತಕ್ಕ ಸಾಮರ್ಥ್ಯವಿತ್ತು. ಎಲ್ಲಿ ಯಾರೊಡನೆ ಇದ್ದರೆ ಅಲ್ಲಿ ಅವರಿಗೆ ತಕ್ಕಂತೆ ನಡೆದುಕೊಳ್ಳುವಳು. ಕೇವಲ ನೀರದನ ಬಳಿ ಮಾತ್ರ ಅವಳು ಬೇರೊಂದು ವ್ಯಕ್ತಿಯಾಗಿ ಬಿಡುವಳು. ಪಟಕಟ್ಟಿದ ದೋಣಿ ನಿಂತು ಹೋಗಿ ಹುಟ್ಟಿನ ಸಹಾಯದಿಂದ ಮೆಲ್ಲನೆ ಸಾಗುವಂತೆ ಇರುವಳು.

ಊರ್ಮಿಯ ಸ್ವಭಾವ ಅವಳ ಅಣ್ಣನಂತೆ ಎಂದು ಎಲ್ಲರ ಹೇಳಿಕೆ. ಅಣ್ಣ ತನ್ನ ಮನಸ್ಸಿಗೆ ಬಿಡುಗಡೆ ಕೊಟ್ಟಿರುವನೆಂಬುದನ್ನು ಊರ್ಮಿ ಬಲ್ಲಳು. ನಮ್ಮ ಕುಟುಂಬಗಳೆಲ್ಲ ಒಂದೊಂದು ಅಚ್ಚಿನಂತೆ, ವ.ಣ್ಣಿನ ಮನುಷ್ಯರನ್ನು ಸೃಷ್ಟಿಸುವುದಕ್ಕಾಗಿ ಇರುವವು. ಆದರಿಂದಲೇ ಅಲ್ಲವೆ ಇಷ್ಟು ದಿನಗಳೂ ವಿದೇಶಿ ಯಕ್ಷಿಣಿಯರು ಇಷ್ಟು ಸುಲಭದಲ್ಲಿ ಮೂವತ್ತುಮೂರು ಕೋಟಿ ಬೊಂಬೆಗಳನ್ನು ಕುಣಿಸುತ್ತಿರುವುದು! "ನಮಗೆ ಕಾಲ ಒದಗಿದಾಗ ಈ ಸಾಮಾಜಿಕ ಮೂರ್ತಿಪೂಜೆಯನ್ನು ನೆಲಸಮಗೊಳಿಸಲು † ಕಾಲಾಪಹಾಡನ ಅವತಾರವೆತ್ತಬೇಕಾದೀತು" ಎಂದು ಅವನು ಹೇಳುತ್ತಿದ್ದನು. ಕಾಲ ಒದಗಲಿಲ್ಲ, ಆದರೆ ಊರ್ಮಿಯ ಮನಸ್ಸನ್ನು ಚನ್ನಾಗಿ ಸಜೀವಗೊಳಿಸಿಟ್ಟು ಹೋಗಿದ್ದನು.

ಈ ವಿಷಯವಾಗಿಯೇ ತೊಡಕು ತಲೆಹಾಕಿತು. ನೀರದನ ಕಾರ್ಯ-ಪದ್ಧತಿ ಅತ್ಯಂತ ವಿಧಿಬದ್ಧವಾದುದು. ಊರ್ಮಿಗಾಗಿ ಪಾಠಪ್ರವಚನಗಳ ನಿಯಮಾವಳಿಯನ್ನು ಸಿದ್ಧಪಡಿಸಿದನು. ಅವಳಿಗೆ ಉಪದೇಶ ಮಾಡಿದನು, "ನೋಡು ಊರ್ಮಿ, ಮನಸ್ಸನ್ನು ದಾರಿಯಲ್ಲಿ ಹೋಗುತ್ತ ಹೋಗುತ್ತ ಸುಮ್ಮನೆ ತುಳುಕಿಸಬೇಡ. ದಾರಿ ಮುಗಿದ ಮೇಲೆ ಕೊಡಗಲ್ಲಿ ಏನೇನೂ ಉಳಿದಿರದು."

'ನೀನು ಮಿಡಿತೆಯಂತೆ ಚಂಚಲಳಾಗಿ ಸುತ್ತಿ ತಿರುಗುವೆ ಏನೂ ಸಂಗ್ರಹಿಸಿ ತರುವವಳಲ್ಲ. ಜೇನುನೊಣದಂತೆ ಆಗಬೇಕಾಗಿದೆ. ಪ್ರತಿಯೊಂದು ಕ್ಷಣಕ್ಕೂ ಲೆಕ್ಕವಿಡೆ. ಬಾಳುವೆ ವಿಲಾಸಿಕೆಯಿಲ್ಲ" ಎನ್ನುವನು.

ಇತ್ತೀಚೆಗೆ ನೀರದನು ಇಂಪೀರಿಯಲ್ ಲೈಬ್ರರಿಯಿಂದ ಶಿಕ್ಷಣತತ್ವದ ಪುಸ್ತಕಗಳನ್ನು ತಂದು ಓದತೊಡಗಿದ್ದನು. ಆದರಲ್ಲಿ ಈ ತರಹದ ವಾಕ್ಯಗಳೂ ಇದ್ದುವು. ಅವನ ಭಾಷೆ ಪುಸ್ತಕಗಳ ಭಾಷೆ, ಯಾಕೆಂದರೆ ಅವನಿಗೆ ಸ್ವಂತದ

---

† ಕಾಲಾಪಹಾಡ— ಹಿಂದುವಾಗಿ ಹುಟ್ಟಿ ಮುಸಲ್ಮಾನನಾಗಿ ಹಿಂದುಗಳ ವಿಗ್ರಹಗಳನ್ನು ನಾಶ ಮಾಡುವುದರಲ್ಲಿ ಪ್ರಸಿದ್ಧನಾದ ಬಂಗಾಳದ ಒಬ್ಬ ಚಾರಿತ್ರಿಕ ವ್ಯಕ್ತಿ.

ಸಹಜವಾದ ಭಾಷೆಯೇ ಇಲ್ಲ. ಊರ್ಮಿಗೆ ತಾನು ತಪ್ಪಿತಸ್ಥಳೆನ್ನುವುದರಲ್ಲಿ ಸಂದೇಹವೇ ಇರಲಿಲ್ಲ. ಅವಳ ವ್ರತ ಮಹತ್ವಪೂರ್ಣವಾದುದು. ಆದ್ದರಿಂದ ಅವಳ ಆ ಮನ ದಿಕ್ಕಿನಿಂದ ಹೆಜ್ಜೆ ಹೆಜ್ಜೆಗೆ ಅತ್ತಿತ್ತ ಹೋದಾಗ ಅವಳಿಗೆ ನಾಚಿಕೆಯಾಗುವುದು. ಅವಳೆದುರಿನಲ್ಲಿ ನೀರದನ ಪ್ರತ್ಯಕ್ಷ ದೃಷ್ಟಾಂತ ವಿತ್ತು. ಅವನದು ಎಂತಹ ದೃಢತೆ, ಏಕಾಗ್ರತೆ; ಎಲ್ಲ ತರಹದ ಆಮೋದ ಆಹ್ಲಾದಗಳ ವಿಷಯ ಎಷ್ಟು ಕಠೋರ ವಿರೋಧ. ಊರ್ಮಿಯ ಮೇಜಿನ ಮೇಲೆ ಕತೆಗಳ ಅಥವಾ ಲಘುಸಾಹಿತ್ಯದ ಯಾವುದಾದರೂ ಪುಸ್ತಕ ಕಂಡರಾಯಿತು; ಅದಕ್ಕೆ ತಕ್ಷಣ ಮುಟ್ಟುಗೋಲು ಬೀಳುತ್ತಿತ್ತು. ಒಂದು ದಿನ ಮಧ್ಯಾಹ್ನದ ವೇಳೆಯಲ್ಲಿ ಊರ್ಮಿಯನ್ನು ವಿಚಾರಿಸಲು ಬಂದಾಗ ಅವಳು ಆಂಗ್ಲ ನಾಟ್ಯಶಾಲೆಗೆ ಸಲ್ಲವಾನನ 'ಮಿಕ್ಯಾಡೊ' ಎಂಬ ಅಪೇರಾದ ಹಗಲ ಆಟ ನೋಡಲು ಹೋಗಿರುವುದಾಗಿ ತಿಳಿಯಿತು. ಅವಳ ಅಣ್ಣ ಇದ್ದಾಗ ಇಂತಹ ಸುಯೋಗಗಳು ವ್ಯರ್ಥವಾಗವು. ಅಂದು ನೀರದ ಅವಳಿಗೆ ತಕ್ಕಮಟ್ಟಿಗೆ ಗದರಿಸಿಕೊಂಡಿದ್ದನು. ಅತ್ಯಂತ ಗಂಭೀರಸ್ವರದ ಇಂಗ್ಲಿಷು ಭಾಷೆಯಲ್ಲಿ 'ನೋಡು, ಇಡೀ ಬಾಳುವೆಯನ್ನು ಅರ್ಪಣೆ ಮಾಡಿ ನಿಮ್ಮ ಅಣ್ಣನ ಸಾವನ್ನು ಸಾರ್ಥಕಗೊಳಿಸುವ ಹೊಣೆಯನ್ನು ನೀನು ಹೊತ್ತಿರುವೆ. ಇಷ್ಟರೊಳಗೆ ಅದನ್ನು ಮರೆತೆಯೇನು" ಎಂದನು.

"ಈ ಮಾತುಗಳನ್ನು ಕೇಳಿ ಊರ್ಮಿಗೆ ಅತ್ಯಂತ ದುಃಖವಾಯಿತು. ಈ ಮನುಷ್ಯನಿಗೆ ಎಂತಹ ಅಸಾಧಾರಣ ಅಂತರ್ದೃಷ್ಟಿಯಿದೆ. ದುಃಖದ ನೆನಪಿನ ಪ್ರಬಲತೆ ನಿಜವಾಗಿ ಕಡಿಮೆಯಾಗುತ್ತ ಬಂದಿದೆ. ನಾನಂತೂ ಅದನ್ನು ತಿಳಿದುಕೊಳ್ಳಲಾರದೆ ಹೋದೆ. ಧಿಕ್. ನನ್ನ ನಡತೆಯಲ್ಲಿ ಇಷ್ಟು ಚಂಚಲತೆಯೇ!" ಎಂದು ಆಲೋಚಿಸಿದಳು. ಎಚ್ಚರಿಕೆಯುಳ್ಳವಳಾಗತೊಡಗಿದಳು. ಉಡಿಗೆತೊಡಿಗೆಗಳಲ್ಲಿ ಸೌಂದರ್ಯದ ಅಲ್ಪ ಭಾವವನ್ನೂ ದೂರಗೊಳಿಸಿದಳು. ಕೈಮಗ್ಗದ ಸೀರೆ ಉಟ್ಟಳು. ಅದರ ಬಣ್ಣವೂ ಮಾಸಿ ಹೋಯಿತು. ಡ್ರಾಯರಲ್ಲಿ ತುಂಬಿದ್ದರೂ ಚಾಕಲೇಟು ತಿನ್ನುವ ಚಪಲವನ್ನು ತಡೆದು ಬಿಟ್ಟಿದ್ದಳು. ಚಂಚಲವಾದ ಮನಸ್ಸನ್ನು ಸಂಪೂರ್ಣವಾಗಿ ಎಳೆದು ಕಿರಿದಾದ ಸ್ಥಳದಲ್ಲಿ ಶುಷ್ಕ ಕರ್ತವ್ಯದ ಆವರಣದಲ್ಲಿ ಅಡಗಿಸಿಡಲು ಪ್ರಯತ್ನಿಸಿದಳು. ಅಕ್ಕನು ಆಕ್ಷೇಪಿಸುವಳು. ಶಶಾಂಕನು ನೀರದನನ್ನು ಉದ್ದೇಶಿಸಿ ಎಷ್ಟೊಂದು ಧಾರಾಳವಾಗಿ ವಿಶೇಷಣಗಳ ಸುರಿಮಳೆ ಮಾಡುತ್ತಿದ್ದನಲ್ಲ ಅವುಗಳ ಭಾಷೆ ನಿಘಂಟಿನ ಹೊರಗೆ ಉಗ್ರ ವಿದೇಶಿಯಾದುವು. ಅವು ಯಾವುವೂ ಅವಳ ಕಿವಿಗೆ ಇಂಪಾಗಿರಲಿಲ್ಲ.

ಒಂದು ವಿಷಯದಲ್ಲಿ ಮಾತ್ರ ನೀರದನಿಗೂ ಶಶಾಂಕನಿಗೂ ಸಾಮ್ಯವಿತ್ತು. ಶಶಾಂಕನ ಬೈಯುವ ಆವೇಗ ಅತಿಯಾದಾಗ ಅವನ ಭಾಷೆ ಇಂಗ್ಲಿಷು ಆಗುತ್ತಿತ್ತು. ನೀರದನು ಉಪದೇಶ ಮಾಡುವಾಗ ಅತ್ಯಂತ ಉಚ್ಚ ಶ್ರೇಣಿಯ ಇಂಗ್ಲೀಷೇ ಅವನಿಗೆ ಸಾಧನವಾಗುತ್ತಿತ್ತು. ಊಟ ಉಪಚಾರಗಳ ಔತಣಗಳಲ್ಲಿ ಅಕ್ಕನ ಮನೆಗೆ ಹೋಗುವುದು ನೀರದನಿಗೆ ಅಸಹ್ಯವಾಗುತ್ತಿತ್ತು. ಅವರುಗಳೊಡನೆ ಊರ್ಮಿಯ ಆತ್ಮೀಯ ಸಂಬಂಧವಿತ್ತಲ್ಲಾ ಅದು ನೀರದನಿಗೆ ಸಹಿಸಲು ಅಸಾಧ್ಯವಾದುದಾಗಿತ್ತು.

ಒಂದು ದಿನ ನೀರದನು ಗಂಭೀರ ಭಾವದೊಡನೆ ಹೇಳಿದನು "ನೋಡು ಊರ್ಮಿ, ಏನೂ ತಿಳಿದುಕೊಳ್ಳಬೇಡ. ನಾನು ಏನು ಮಾಡಲಿ, ನಿನ್ನ ವಿಷಯದಲ್ಲಿ ನನ್ನ ಹೊಣೆಗಾರಿಕೆಯಿದೆ. ಆದ್ದರಿಂದಲೇ ಕರ್ತವ್ಯದ ಭಾರದಿಂದ ನಿನಗೆ ಅಪ್ರಿಯವಾದ ಮಾತು ಹೇಳಬೇಕಾಗಿದೆ. ನಾನು ನಿನ್ನನ್ನು ಎಚ್ಚರಿಸುತ್ತೇನೆ. ಆತ್ಮೀಯತೆಯ ಮೋಹದಲ್ಲಿ ನೀನು ಕುರುಡಿ. ಕೆಡುಕಿನ ಮುಂದಿನ ಹಾದಿಯನ್ನು ನಾನು ಸ್ಪಷ್ಟವಾಗಿ ನೋಡುತ್ತಿರುವೆ"

ಊರ್ಮಿಯ ನಡತೆಯೆಂಬುದು ಯಾವುದನ್ನು ಹೇಳಲು ಸಾಧ್ಯವೋ ಅದರ ಮೊದಲ ಅಡವು ಪತ್ರ ನೀರದನ ಪೆಟ್ಟಿಗೆಯಲ್ಲಿ ಭದ್ರವಾದಂತೆ. ಆ ನಡತೆಯಲ್ಲಿ ಎಲ್ಲಾದರೂ ಅಲ್ಪ ಸ್ವಲ್ಪ ವ್ಯತ್ಯಾಸವಾದರೂ ನಷ್ಟ ನೀರದನದೇ. ನಿಷೇಧದ ಫಲವಾಗಿ ಇತ್ತೀಚೆಗೆ ಭವಾನೀಪುರದ ಎಲ್ಲೆಯಲ್ಲಿ ಊರ್ಮಿಯ ಓಡಾಟ ನಾನಾ ಸಬೂಬುಗಳೊಡನೆ ಕಡಿಮೆಯಾಗಿತ್ತು. ಊರ್ಮಿಯ ಈ ಆತ್ಮಶಾಸನ ಒಂದು ದೊಡ್ಡ ಸಾಲವನ್ನು ತೀರಿಸುವಂತೆ. ಅವಳ ಬಾಳುವೆಯ ಹೊಣೆಗಾರಿಕೆಯ ವಿಷಯವಾಗಿ ನೀರದನು ಶಾಸ್ವತವಾಗಿ ತನ್ನ ಸಾಧನೆಯ ದಾರಿಯನ್ನು ಬದಲಾಯಿಸಿದ್ದನಲ್ಲ ವಿಜ್ಞಾನ ತಪಸ್ಸಿಗೆ ಅದಕ್ಕಿಂತ ದೊಡ್ಡ ಆತ್ಮ ಅಪವ್ಯಯ ಇನ್ನೇನು ತಾನೇ ಇರಲಾದೀತು ?

ಹಲವು ಆಕರ್ಷಣೆಗಳಿಂದ ಮನಸ್ಸನ್ನು ವಿಮುಖಗೊಳಿಸುವ ದುಃಖವನ್ನು ಊರ್ಮಿ ಒಂದು ವಿಧವಾಗಿ ಸಹಿಸಿಕೊಳ್ಳತೊಡಗಿದ್ದಳು. ಆದರೂ ಆಗಾಗ್ಗೆ ಮನಸ್ಸಿನಲ್ಲಿ ಒಂದು ವೇದನೆ ತಡೆಯಲಸಾಧ್ಯವಾಗಿ ಹೊರಹೊಮ್ಮುತ್ತಿತ್ತು. ಅದನ್ನು ಚಂಚಲತೆಯೆಂದು ಸಂಪೂರ್ಣವಾಗಿ ಅಲಕ್ಷ ಮಾಡಲು ಸಾಧ್ಯವಿಲ್ಲ. ನೀರದನು ಅವಳನ್ನು ನಡಸುವದರಲ್ಲೇ ಸದಾ ಪ್ರವೃತ್ತನಾಗಿದ್ದನಲ್ಲದೆ ಅವಳ ಸಾಧನೆಗೆ ಸಹಾಯ ಮಾಡುತ್ತಿರಲಿಲ್ಲ. ಈ ಸಹಾಯಕ್ಕಾಗಿ ಅವಳ ಮನ ಇದಿರು ನೋಡುತ್ತಿತ್ತು. ಈ ಸಹಾಯದ ಅಭಾವದಿಂದ ಅವಳ

ಹೃದಯದ ಮಾಧುರ್ಯ ಪೂರ್ಣ ವಿಕಾಸಗೊಳ್ಳಲಿಲ್ಲ. ಅವಳ ಎಲ್ಲ ಕೆಲಸವೂ ನಿರ್ಜೀವವೂ ನಿರಸವೂ ಆಯಿತು. ಒಮ್ಮೊಮ್ಮೆ ಅಕಸ್ಮಾತ್ತಾಗಿ ನೀರದನ ದೃಷ್ಟಿಯಲ್ಲಿ ಒಂದು ಆವೇಶ ಬಂದಿರುವುದು. ಅವಳ ಹೃದಯಾಂತರಾಳದ ರಹಸ್ಯ ವಿಳಂಬವೇ ಇಲ್ಲದೆ ಹೊರಬೀಳುವುದೆಂದು ಅವಳಿಗೆ ತೋರುವುದು. ಆದರೆ ಆ ಗಭೀರ ವೇದನೆಯ ಭಾಷೆಯನ್ನು ಅಂತರ್ಯಾಮಿ ಬಲ್ಲನಲ್ಲದೆ ನೀರದನಿಗೆ ಅರ್ಥವಾಗುತ್ತಿರಲಿಲ್ಲ. ಹೇಳಲು ಸಾಧ್ಯವಿಲ್ಲವೆಂದೇ ಹೇಳ ಬೇಕೆಂಬ ಆಶೆಯನ್ನು ಅವಳು ತಪ್ಪೆಂದು ಎಣಿಸುವಳು. ಚಂಚಲವಾದ ಚಿತ್ತ ವನ್ನು ಮೌನವಾಗಿಟ್ಟೇ ಅವಳು ಮುಂದುವರಿದಿದ್ದಳಲ್ಲಾ ಅದು ಅವಳ ಸಾಮ ರ್ಥ್ಯದ ಪರಿಚಯವೆಂದು ಅವಳು ಹೆಮ್ಮೆ ಪಡುವಳು. ಸೆಂಟಿಮೆಂಟಾಲಿಟಿ ಆಚರಿಸುವದು ನನ್ನ ಕರ್ತವ್ಯವಲ್ಲ ಎನ್ನುವಳು. ಒಮ್ಮೊಮ್ಮೆ ಊರ್ಮಿಗೆ ಅಳು ಬರುವದು. ಆದರೆ ಅವಳ ಸ್ಥಿತಿ ಹೇಗಾಗಿತ್ತೆಂದರೆ ಭಕ್ತಿಯ ಆವೇಗದಿಂದ ಅದನ್ನು ತಡೆದುಕೊಳ್ಳುವಳು. ತನ್ನ ದುರ್ಬಲ ಮನಸ್ಸಿನಲ್ಲಿ ಒಂದು ದಿನ ಪ್ರಬಲ ದುಃಖದ ಇದಿರಿನಲ್ಲಿ ಯಾವ ಕಠಿಣ ಕರ್ತವ್ಯವನ್ನು ಸ್ವೇಚ್ಛೆಯಿಂದ ಸ್ವೀಕರಿಸಿದ್ದೆನೋ ಕಾಲಕ್ರಮದಲ್ಲಿ ತನ್ನ ಇಚ್ಛೆ ದುರ್ಬಲವಾದುದರಿಂದ ಅನ್ಯರ ಇಚ್ಛೆಯ ಆ ... ಪಿ ಸಿಕೊ ... ಅವಳಿಗೆ ಅನಿಸುತ್ತಿತ್ತು.

ನೀರದನು ಅವಳಿಗೆ ಸ್ಪಷ್ಟವಾಗಿ ಹೇಳುತ್ತಿದನು:—"ನೋಡು ಊರ್ಮಿ ಸಾಮಾನ್ಯ ಸ್ತ್ರೀಯರು ಪುರುಷರ ಬಳಿಯಿಂದ ಎಷ್ಟೊಂದು ಸ್ತುತಿ ಇದಿರು ನೋಡುವರು ... ನನ್ನಿಂದ ಪಡೆಯುವ ಆಶೆಯಿಲ್ಲವೆಂಬುದನ್ನು ನೆನ ಪಿನಲ್ಲಿಡು. ನಾನು ನಿನಗೆ ಏನು ಕೊಡುವೆನೋ ಅದು ಈ ಎಲ್ಲ ತರಹದ ಕಲ್ಪಿತ ವಿಷಯಗಳಿಗಿಂತ ಸತ್ಯವಾದುದು ಅತ್ಯಂತ ಬೆಲೆಯುಳ್ಳದ್ದು."

ಊರ್ಮಿ ತಲೆ ತಗ್ಗಿಸಿ ಸುಮ್ಮನಿರುವಳು. ಇವನ ಹತ್ತಿರ ಯಾವ ವಿಷಯದಲ್ಲೂ ಮುಚ್ಚುಮರೆಯೇ ಇಲ್ಲವೇನು ಎಂದು ಮನಸ್ಸಿನಲ್ಲಿ ಅಂದು ಕೊಳ್ಳುವಳು.

ಯಾವ ವಿಧದಲ್ಲೂ ಮನಸ್ಸಿಗೆ ನೆಮ್ಮದಿಯಿಲ್ಲವಾಯಿತು. ಬಿಸಿಲು ಮಾಳ ಡಿಯ ಮೇಲೆ ಒಂಟಿಯಾಗಿ ಅಡ್ಡಾಡಲು ಹೋಗುವಳು. ಸಂಜೆಯ ಬೆಳಕು ಮಬ್ಬಾಗುತ್ತ ಬರುವುದು. ನಗರದ ಎತ್ತರ ತಗ್ಗಿನ ನಾನಾ ಆಕಾರದ ಮನೆಗಳ ಮೇಲ್ಭಾಗವನ್ನು ದಾಟಿ ಸೂರ್ಯನು ದೂರದ ಗಂಗೆಯ ತೀರದಲ್ಲಿ ಹಡಗುಗಳ ಸ್ತಂಭಗಳ ಆಚೆಯ ಕಡೆ ಅಸ್ತಮಿಸುವನು. ನಾನಾ ವರ್ಣದ ಉದ್ಬುದ್ಧವಾದ ಮೋಡದ ರೇಖೆಗಳು ಹಗಲಿನ ಎಲ್ಲೆಯ ಬೇಲಿ ಹಾಕುವವು. ಕ್ರಮೇಣ

ಬೇಲಿ ಕಣ್ಮರೆಯಾಗುವದು. ಕ್ರೈಸ್ತ ದೇವಾಲಯದ ಶಿಖರದ ಮೇಲಿಂದ ಚಂದ್ರನು ಉದಯಿಸುವನು. ಮಬ್ಬು ಬೆಳಕಿನಲ್ಲಿ ನಗರ ಕನಸಿನಂತೆ, ಅಲೌಕಿಕ ಮಾಯಾಪುರಿಯಂತೆ ಕಾಣುವುದು. ಬಾಳುವೆ ಸಹಜವಾಗಿ ಇಷ್ಟು ಕಠಿಣವೇ ಎಂಬ ಪ್ರಶ್ನೆ ಮನದಲ್ಲಿ ಏಳುವುದು. ಅದು ಇಷ್ಟು ಜಿಪುಣತೆಯುಳ್ಳುದೇ ಎಂದು ಸಂದೇಹವಾಗುವುದು. ಅದು ವಿರಾಮ ಕೊಡದು. ಆನಂದ ಕೊಡದು. ಹಠಾತ್ತಾಗಿ ಮನಸ್ಸು ಹುಚ್ಚಿಗೇಳುವುದು ಭಾರೀ ತುಂಟಾಟ ಮಾಡುವುದು. ನಾನು ಯಾವುದಕ್ಕೂ ಅಡಗಿರೆನು ಎಂದು ಘಟ್ಟಿಯಾಗಿ ಕೂಗಿ ಹೇಳಬೇಕು ಎಂದು ಇಚ್ಛೆಯಾಗುವುದು.

## ಊರ್ಮಿಮಾಲಿ

ನೀರದನು ಮಾಡುತ್ತಿದ್ದ ರೀಸರ್ಚಿನ ಕೆಲಸ ಮುಗಿಯಿತು. ಯುರೋಪಿನ ಯಾವುದೋ ಒಂದು ವೈಜ್ಞಾನಿಕ ಸಮಾಜಕ್ಕೆ ಲೇಖನ ಕಳುಹಿಸಿದನು. ಅವರು ಹೊಗಳಿದರು. ಅದರ ಸಂಗಡಲೇ ಒಂದು ಸ್ಕಾಲರಶಿಪ್ಪೂ ಸಿಕ್ಕಿತು. ಅಲ್ಲಿಯ ವಿಶ್ವವಿದ್ಯಾಲಯದ ಪದವೀಧರನಾಗಲು ಸಮುದ್ರವನ್ನು ದಾಟಲು ನಿರ್ಧರಿಸಿದನು.

ಬೀಳ್ಕೊಡುವಾಗ ಯಾವ ವಿಧದ ಕರುಣಾಪೂರಿತ ಮಾತುಕಥೆ ನಡೆಯಲಿಲ್ಲ "ನಾನು ಹೋಗುವೆನು. ಈಗ ನಿನ್ನ ಕರ್ತವ್ಯಸಾಧನೆಯಲ್ಲಿ ಶಿಥಿಲತೆಯಾಗುವದು. ಇದೇ ನನ್ನ ಭಯ" ಎಂದು ಬಾರಿಬಾರಿಗೆ ಹೇಳಿದನು. ಊರ್ಮಿ "ಯಾವ ವಿಧದ ಭಯಪಡಬೇಕಾದ ಆವಶ್ಯಕತೆಯೂ ಇಲ್ಲ" ಎಂದಳು. "ಪಾಠಪ್ರವಚನಗಳ ವಿಷಯದಲ್ಲಿ ವಿಸ್ತಾರವಾದೊಂದು ಟಿಪ್ಪಣಿ ಬರೆದುಕೊಟ್ಟು ಹೋಗುತ್ತೇನೆ" ಎಂದು ನೀರದನು ಹೇಳಿದನು.

'ಅದಕ್ಕನುಸಾರವಾಗಿ ನಾನು ನಡೆಯುವೆ' ಎಂದು ಊರ್ಮಿ ಹೇಳಿದಳು.

"ನಿನ್ನ ಅಲಮಾರಿನಲ್ಲಿರುವ ಆ ಕಥೆ ಪುಸ್ತಕಗಳನ್ನು ನಾನು ನಮ್ಮ ಮನೆಗೆ ಎತ್ತಿಕೊಂಡು ಭದ್ರವಾಗಿಡಲಪೇಕ್ಷಿಸುತ್ತೇನೆ."

"ಎತ್ತಿಕೊಂಡು ಹೋಗಿ" ಎಂದು ಹೇಳಿ ಊರ್ಮಿ ಅವನ ಕೈಗೆ ಬೀಗದ ಕೈಗಳನ್ನು ಕೊಟ್ಟಳು. ನೀರದನ ದೃಷ್ಟಿ ಸೀತಾರಿನ ಕಡೆಗೆ ಒಮ್ಮೆ ಬಿದ್ದಿತು. ಕ್ಷಣಕಾಲ ಆಲೋಚಿಸಿ ಸುಮ್ಮನಾದನು.

ಕೊನೆಗೆ ಕರ್ತವ್ಯದ ಅನುರೋಧದಿಂದ ನೀರದನು ಕೆಲವು ಮಾತುಗಳನ್ನು ಹೇಳಬೇಕಾಯಿತು. "ನನಗೆ ಒಂದೇ ಒಂದು ಹೆದರಿಕೆಯಿದೆ. ನೀನು ಮತ್ತೆ ಶಶಾಂಕಬಾಬುಗಳ ಮನೆಗೆ ಎಡೆಬಿಡದೆ ಹೋಗಿ ಬರತೊಡಗುವೆ. ಹಾಗಾದರೆ ನಿನ್ನ ನಿಷ್ಠೆ ಸಡಿಲವಾಗಿ ಬಿಡುವುದೆನ್ನಲು ಏನೇನೂ ಸಂದೇಹವಿಲ್ಲ. ನಾನು ಶಶಾಂಕಬಾಬುಗಳನ್ನು ನಿಂದಿಸುವೆನೆಂದು ಎಣಿಸಬೇಡ. ಅವರು ಒಳ್ಳೆಯವರು ನಿಜ. ಕೆಲಸದಲ್ಲಿ ಅವರಷ್ಟು ಉತ್ಸಾಹ ಅವರಂತಹ ಬುದ್ಧಿ ಇರುವ ಬಂಗಾಳಿಗಳು ತೀರ ಕಡಿಮೆ. ಅವರಲ್ಲಿರುವ ಒಂದು ದೋಷವೆಂದರೆ ಅವರು ಯಾವುದೊಂದು ಆದರ್ಶವನ್ನೂ ಅಂಗೀಕರಿಸರು. ಸತ್ಯವಾಗಿ ಹೇಳುತ್ತೇನೆ. ಅವರ ವಿಷಯವಾಗಿ ಹಲವು ಬಾರಿ ನನಗೆ ಭಯವಾಗುತ್ತೆ."

ಅಲ್ಲಿಂದ ಶಶಾಂಕನ ಹಲವಾರು ದೋಷಗಳ ಸುದ್ದಿ ತಲೆ ಹಾಕಿತು. ಈಗ ಯಾವ್ಯಾವ ದೋಷಗಳು ಅಡಗಿಸಲ್ಪಟ್ಟಿವೆಯೋ ಅವೆಲ್ಲ ವಯಸ್ಸು ಹೆಚ್ಚಿದಂತೆ ಒಂದೊಂದಾಗಿ ಪ್ರಬಲ ಆಕಾರದಲ್ಲಿ ಪ್ರಕಟವಾಗುವವೆಂಬ ಭಾರೀ ದುರ್ಭಾವನೆಯ ಸಂಗತಿಯನ್ನು ಹೇಳದಿರಲು ನೀರದನಿಂದ ಆಗಲಿಲ್ಲ. ಆದರೆ ಏನೇ ಆಗಲಿ ಅವರು ಬಹು ಒಳ್ಳೆಯವರೆಂಬ ಸಂಗತಿಯನ್ನು ಅವನು ಬಾಯಿ ತುಂಬ ಹೊಗಳಿದನು. ಹಾಗೆಯೇ ಅವರ ಸಹವಾಸ ದೋಷದಿಂದ, ಅವರ ಮನೆಯ ವಾತಾವರಣದಿಂದ ತನ್ನನ್ನು ಕಾಪಾಡಿಕೊಳ್ಳುವುದು ಊರ್ಮಿಗೆ ಅತ್ಯಾವಶ್ಯಕವೆಂದು ಹೇಳಿದನು. ಊರ್ಮಿಯ ಮನಸ್ಸು ಅವರ ಸಮ ಭೂಮಿಗೆ ಇಳಿದುದಾದರೆ ಅದು ಅಧಃಪತನವೆಂದನು.

" ನೀವೇಕೆ ಇಷ್ಟೊಂದು ಉದ್ವಿಗ್ನರಾಗುವಿರಿ ? " ಎಂದು ಊರ್ಮಿ ಹೇಳಿದಳು.

"ಏಕೆ ಆಗುವೆ ಕೇಳುವೆಯೇನು? ಕೋಪಿಸಿಕೊಳ್ಳುವುದಿಲ್ಲವಷ್ಟೆ?"

"ಸತ್ಯವಾದುದನ್ನು ಹೇಳುವ ಶಕ್ತಿ ನಿಮ್ಮ ಬಳಿಯೇ ಹೊಂದಿರುವೆ. ಅದು ಸಹಜವಲ್ಲವೆಂದು ಅರಿತಿರುವೆ. ಆದರೆ ಸಹಿಸಬಲ್ಲೆ."

"ಹಾಗಾದರೆ ಹೇಳುವೆ ಕೇಳು. ನಿನ್ನ ಸ್ವಭಾವದೊಡನೆ ಶಶಾಂಕ ಬಾಬುಗಳ ಸ್ವಭಾವಕ್ಕೆ ಒಂದು ವಿಧವಾದ ಹೋಲಿಕೆಯಿದೆ. ಇದನ್ನು ನಾನು ಲಕ್ಷಿಸಿ ನೋಡಿರುವೆ. ಅವರ ಮನಸ್ಸು ಅತಿ ಹಗುರವಾದುದು. ಅದೇ ನಿನಗೆ ಹಿಡಿಸುತ್ತಿದೆ. ನಿಜ ಅಲ್ಲವೇ ಹೇಳು?"

ಈ ಮನುಷ್ಯ ಸರ್ವಜ್ಞನೆಂದು ಊರ್ಮಿ ಅಂದುಕೊಂಡಳು. ಅಕ್ಕನ ಗಂಡ ಅವಳಿಗೆ ಇಷ್ಟವಾದವನೇ ಎನ್ನಲು ಸಂದೇಹವಿಲ್ಲ. ಇದಕ್ಕೆ ಮುಖ್ಯ ಕಾರಣ ಶಶಾಂಕ ಹೋ ಹೋ ಎಂದು ನಗಬಲ್ಲ. ಉತ್ಪಾತ ಮಾಡಲು ಅರಿತವ. ಹಾಸ್ಯ ಕುಚೇಷ್ಟೆ ಮಾಡುವವ. ಅಷ್ಟೇ ಅಲ್ಲ ಊರ್ಮಿಗೆ ಯಾವ ಹೂವು ಇಷ್ಟ. ಯಾವ ಬಣ್ಣದ ಸೀರೆ ರುಚಿಸುವುದು ಎಂಬುದನ್ನೂ ಬಲ್ಲ.

ಊರ್ಮಿ ಹೇಳಿದಳು "ಹೌದು. ನನಗೆ ಇಷ್ಟವೇ. ಆ ಮಾತು ಸತ್ಯ." ನೀರದನು "ಶರ್ಮಿಳಾ ಅಕ್ಕನ ಪ್ರೀತಿ ಸ್ನಿಗ್ಧಗಂಭೀರವಾದುದು. ಅವಳ ಸೇವೆ ಒಂದು ಪುಣ್ಯಕರ್ಮದಂತೆ. ಕರ್ತವ್ಯದಿಂದ ಎಂದೂ ವಿರಾಮ ಹೊಂದುವವಳಲ್ಲ. ಅವಳ ಪ್ರಭಾವದಿಂದಲೇ ಶಶಾಂಕ ಬಾಬುಗಳು ಏಕಾಗ್ರತೆಯಿಂದ ಕೆಲಸ ಮಾಡಲು ಕಲಿತರು. ಆದರೆ ಎಂದು ನೀನು ಭವಾನೀಪುರಕ್ಕೆ ಹೋಗುವೆಯೋ ಅಂದು ಅವರ ಮುಖವಾಡ ಕಳಚಿಬೀಳುವುದು. ನಿನ್ನೊಡನೆ ಹುಡುಗಾಟಿಕೆಗೆ ಆರಂಭಿಸುವರು. ಹೇರ್‌ಪಿನ್ ಎಳೆದು ಹೆರಳನ್ನು ಬಿಚ್ಚುವರು. ನಿನ್ನ ಕೈಯಲ್ಲಿ ಓದುವ ಪುಸ್ತಕವಿದ್ದರೆ ಕಿತ್ತು ಅಲಮಾರಿನ ಮೇಲಿಡುವರು. ಕೈಯಲ್ಲಿ ಕೆಲಸವಿದ್ದರೂ ಟೆನ್ನಿಸ್ ಆಡಬೇಕೆಂಬ ಚಟ ಹಠಾತ್ತಾಗಿ ಪ್ರಬಲವಾಗುವುದು."

ಶಶಾಂಕನು ಈ ತರಹದ ತುಂಟತನ ಮಾಡುವುದರಿಂದಲೇ ಅವನನ್ನು ಕಂಡರೆ ತನಗೆ ಇಷ್ಟವೆಂಬ ಸಂಗತಿಯನ್ನು ಊರ್ಮಿ ಒಳಗೊಳಗೆ ಒಪ್ಪಿಕೊಳ್ಳಲೇಬೇಕಾಗಿತ್ತು. ಅವನು ಹತ್ತಿರ ಬಂದರೆ ಅವಳ ಹುಡುಗಾಟಿಕೆಗೆ ಬೆಂಬಲ ಕೊಟ್ಟಹಾಗಾಗುತ್ತಿತ್ತು. ಆವಳು ಕೂಡ ಅವನನ್ನು ಹಿಂಸಿಸುವುದರಲ್ಲಿ ಹಿಂದಾಗುತ್ತಿರಲಿಲ್ಲ. ಇವರಿಬ್ಬರ ತುಂಟಾಟವನ್ನು ನೋಡಿ ಅಕ್ಕನು ಒಮ್ಮೊಮ್ಮೆ ಹುಸಿನಗೆ ನಗುವಳು. ಒಮ್ಮೊಮ್ಮೆ ಮೆಲ್ಲಗೆ ಗದರಿಸುವಳು. ಆದರೆ ಆ ಗದರಿಕೆ ಕೇವಲ ತೋರಿಕೆಗೆ ಮಾತ್ರ.

ಉಪಸಂಹಾರವಾಗಿ ನೀರದನು ಹೇಳಿದನು:-"ಎಲ್ಲಿ ನಿನ್ನ ಸ್ವಂತ ಸ್ವಭಾವಕ್ಕೆ ಬೆಂಬಲ ಸಿಕ್ಕದೋ ಅಲ್ಲಿ ನೀನು ಇರಬೇಕಾದುದು ಅವಶ್ಯಕ. ನಾನು ಹತ್ತಿರ ಇದ್ದುದಾದರೆ ಯೋಚನೆ ಇರುತ್ತಿರಲಿಲ್ಲ. ಏಕೆಂದರೆ ನನ್ನ ಸ್ವಭಾವ ಸಂಪೂರ್ಣವಾಗಿ ನಿನ್ನದರ ವಿರುದ್ಧವಾದುದು. ನಿನ್ನ ಮನಸ್ಸನ್ನು ರಕ್ಷಿಸ ಲೆತ್ನಿಸಿ ಅವನ್ನು ಮಣ್ಣಿನ ಸನು ಮಾಡುವುದು ನನ್ನಿಂದ ಎಂದೂ ಆಗದ ವಿಷಯ."

'ನಿಮ್ಮ ಮಾತುಗಳನ್ನು ನಾನು ಸರ್ವದಾ ನೆನಪಿನಲ್ಲಿಡುವೆನು' ಎಂದು ಊರ್ಮಿ ತಲೆ ತಗ್ಗಿಸಿಕೊಂಡು ಹೇಳಿದಳು.

'ನಾನು ನಿನಗೋಸ್ಕರ ಕೆಲವು ಪುಸ್ತಕಗಳನ್ನಿಟ್ಟು ಹೋಗುವೆ. ಅವುಗಳಲ್ಲಿ ಯಾವ್ಯಾವ ಅಧ್ಯಾಯಗಳನ್ನು ಪೆನ್ಸಿಲ್ಲಿನಿಂದ ಗುರುತು ಮಾಡಿರುವೆನೋ ಅವನ್ನು ಗಮನವಿಟ್ಟು ಓದು. ಅವು ನಿನಗೆ ಉಪಯೋಗವಾಗುವವು' ಎಂದು ನೀರದನೆಂದನು.

ಊರ್ಮಿಗೆ ಈ ಸಹಾಯದ ಆವಶ್ಯಕತೆಯಿತ್ತು. ಯಾಕೆಂದರೆ ಈಚೆಗೆ ನಡುನಡುವೆ ಅವಳ ಮನದಲ್ಲಿ ಮೇಲಿಂದ ಮೇಲೆ ಸಂದೇಹಗಳು ತಲೆಹಾಕುತ್ತಿದ್ದವು. ಮೊದಲ ಉತ್ಸಾಹದಲ್ಲಿ ತಪ್ಪು ಮಾಡಿದೆನೇನೋ; ಡಾಕ್ಟರೀ ವಿದ್ಯೆ ನನ್ನ ಪ್ರಕೃತಿಗೆ ಸರಿಹೋಗದೇನೋ ಎಂದು ಅಂದುಕೊಳ್ಳುವಳು.

ನೀರದನು ಗುರ್ತು ಮಾಡಿದ ಪುಸ್ತಕಗಳು ಅವಳಿಗೆ ಒಂದು ಬಲವಾದ ಬಂಧನದಂತೆ; ಅವಳನ್ನು ಸರಿಯಾದ ಮಾರ್ಗದಲ್ಲಿ ಕರೆದೊಯ್ಯಲು ತಕ್ಕುವು.

ನೀರದನು ಹೊರಟು ಹೋಗಲು ಊರ್ಮಿ ತನ್ನ ವಿಷಯದಲ್ಲಿ ಹೆಚ್ಚು ಕಠಿಣ ವ್ಯವಹಾರ ಆರಂಭಿಸಿದಳು. ಕಾಲೇಜಿಗೆ ಹೋಗುವಳು. ಉಳಿದ ವೇಳೆಯಲ್ಲಾ ತನ್ನನ್ನು ಸಂಪೂರ್ಣವಾಗಿ ಅಂತಃಪುರದಲ್ಲಿ ಬಚ್ಚಿಟ್ಟಂತೆ ಇರುವಳು. ಹಗಲು ಕಳೆದ ನಂತರ ಮನೆಗೆ ಹಿಂತಿರುಗಿ ಅವಳ ದಣಿದ ಮನಸ್ಸು ಎಷ್ಟು ವಿರಾಮ ಆಶಿಸುವುದೋ ಅಷ್ಟು ನಿಷ್ಠುರಭಾವದಿಂದ ಅದನ್ನು ಅಧ್ಯಯನದ ಸಂಕೋಲೆಯಲ್ಲಿ ಬಂಧಿಸಿಡುವಳು. ಓದು ಮುಂದುವರಿಯದು. ಒಂದೇ ಹಾಳೆಯ ಮೇಲೆ ಅಡಿಗಡಿಗೆ ಮನಸ್ಸು ವ್ಯರ್ಥವಾಗಿ ತಿರುಗುವುದು. ಆದರೂ ಸೋಲನ್ನು ಒಪ್ಪಳು. ನೀರದನು ಹತ್ತಿರದಲ್ಲಿಲ್ಲ. ಆದ್ದರಿಂದಲೇ, ದೂರವಾಗಿದ್ದ ಅವನ ಇಚ್ಛಾಶಕ್ತಿ ಅವಳ ಮೇಲೆ ಹೆಚ್ಚಾಗಿ ಅಧಿಕಾರ ಮಾಡತೊಡಗಿತು.

ಕೆಲಸ ಮಾಡುತ್ತ ಮಾಡುತ್ತ ಹಿಂದಿನ ದಿನಗಳ ಸಂಗತಿಗಳು ನೆನಪಾದಾಗ ಅವಳಿಗೆ ತನ್ನ ವಿಷಯವಾಗಿ ಬೇಸರವಾಗುವುದು. ತರುಣರ ದಲದಲ್ಲಿ ಅವಳ ಭಕ್ತರು ಹಲವರಿದ್ದರು. ಆ ಕಾಲದಲ್ಲಿ ಅವರಲ್ಲಿ ಕೆಲವರನ್ನು ಅವಳು ಉಪೇಕ್ಷಿಸಿದ್ದಳು. ಕೆಲವರ ವಿಷಯದಲ್ಲಿ ಮನಸ್ಸು ಚಂಚಲವಾಗಿಯೂ ಇತ್ತು. ಪ್ರೀತಿಯಲ್ಲಿ ಸಮಾಪ್ತವಾಗಲಿಲ್ಲ. ಆದರೆ ಪ್ರೀತಿಯ ಇಚ್ಛೆಯೇ ಆಗ ಮೃದುಮಂದ ವಸಂತಮಾರುತದಂತೆ ಅವಳ ಮನಸ್ಸಿನ ಮಧ್ಯೆ ಸುತ್ತುತ್ತಿತ್ತು. ಆದ್ದರಿಂದಲೇ

ತನ್ನ ಮನಸ್ಸಿನೊಳಗೇ ಹಾಡುವಳು. ಮನಸ್ಸಿಗೆ ಒಪ್ಪಿದ ಕವನಗಳನ್ನು ಪುಸ್ತಕದಲ್ಲಿ ನಕಲು ಮಾಡಿ ಇಡುವಳು. ಮನಸ್ಸು ಅತಿ ಚಂಚಲವಾದರೆ ಸಿತಾರ್ ಬಾರಿಸುವಳು. ಇತ್ತೀಚೆಗೆ ಒಂದೊಂದು ದಿನ ಸಂಜೆ ಹೊತ್ತು ಪುಸ್ತಕದ ಹಾಳೆಯ ಮೇಲೆ ದೃಷ್ಟಿ ಇಟ್ಟಿರುವಾಗ ಅವಳಿಗೆ ಅಕಸ್ಮಾತ್ತಾಗಿ ಹಿಂದೆ ಎಂದೋ ಒಂದು ದಿನ ತಾನು ಕಂಡಿದ್ದ, ಆದರೆ ಆಗ ಯಾವ ವಿಧದಲ್ಲೂ ಲಕ್ಷಿಸದಿದ್ದ ಮನುಷ್ಯನ ಚಿತ್ರ ಅವಳ ಮನಸ್ಸಿನಲ್ಲಿ ಗೋಚರಿಸುತ್ತಿತ್ತು. ಅಷ್ಟೇಕೆ, ಆ ಕಾಲದಲ್ಲಿ ಆ ಮನುಷ್ಯನ ಕಡೆಯಿಲ್ಲದ ಬಲತ್ಕಾರ ಅವಳಿಗೆ ಬೇಸರವನ್ನೂ ಉಂಟು ಮಾಡಿತ್ತು. ಪ್ರಾಯಶಃ ಆ ಬಲಾತ್ಕಾರವೇ ಮಿಡಿತೆಯ ರೆಕ್ಕೆ ವಸಂತದ ಗಾಳಿಯಿಂದ ಹೇಗೆ ಅಲಗುವುದೋ ಹಾಗೆ ಅವಳ ಮನಸ್ಸನ್ನು ಚಂಚಲಗೊಳಿಸುತ್ತಿತ್ತು.

ಈ ತರಹದ ಚಿಂತೆಗಳೆಲ್ಲವನ್ನೂ ಎಷ್ಟು ಬಲಾತ್ಕಾರದಿಂದ ಅವಳು ಮನಸ್ಸಿನಿಂದ ದೂರವಾಗಿಡಲು ಯತ್ನಿಸುವಳೋ ಆ ಬಲಾತ್ಕಾರದ ಹೊಡೆತವೇ ಚಿಂತೆಗಳನ್ನು ಅವಳ ಮನಸ್ಸಿನಲ್ಲಿ ಮತ್ತೆ ತಂದಿಡುತ್ತಿದ್ದುವು. ಡೆಸ್ಕಿನ ಮೇಲೆ ನೀರದನ ಫೋಟೋ ಒಂದನ್ನು ಇಟ್ಟಿದ್ದಳು. ಆದರ ಕಡೆ ಒಂದು ಕಣ್ಣು ಇಟ್ಟೇ ಇರುವಳು. ಆ ಮುಖದಲ್ಲಿ ಬುದ್ಧಿಯ ದೀಪ್ತಿಯಿದೆ. ಪಟ್ಟು ಹಿಡಿದು ಕೆಲಸ ಸಾಧಿಸುವ ಸ್ವಭಾವದ ಚಿಹ್ನೆಯಿದೆ. ಅದು ಅವಳನ್ನು ಕರೆಯುತ್ತಿರಲಿಲ್ಲ. ಆದರೂ ಅದರ ಪ್ರಾಣ ಯಾರನ್ನೂ ಎಚ್ಚರಗೊಳಿಸುತ್ತಿತ್ತು; ಎಂತಹ ಪ್ರತಿಭೆ, ಎಂತಹ ತಪಸ್ಸು, ಎಷ್ಟು ನಿರ್ಮಲವಾದ ನಡತೆ, ನನ್ನದೆಂತಹ ಎಣೆಯಿಲ್ಲದ ಅದೃಷ್ಟ, ಎಂದು ಮನಸ್ಸಿನಲ್ಲೇ ಜಪಿಸುವಳು.

ಒಂದು ವಿಷಯದಲ್ಲಿ ನೀರದನಿಗೆ ಗೆಲುವಾಗಿತ್ತು. ಅದನ್ನು ಹೇಳಬೇಕಾದುದು ಅವಶ್ಯಕ. ನೀರದನೊಡನೆ ಊರ್ಮಿಯ ಮದುವೆಯ ಸಂಬಂಧ ಗೊತ್ತಾಗಲು ಶಶಾಂಕನೂ ಮತ್ತು ಸಂದಿಗ್ಧ ಮನದ ಇನ್ನೂ ಹತ್ತು ಜನರೂ ಕುಚೇಷ್ಟೆ ಮಾಡಿ ನಕ್ಕಿದ್ದರು. "ರಾಜಾರಾವ್ ಬಾಬುಗಳು ಸರಳ ಸ್ವಭಾವದವರು. ನೀರದನು 'ಐಡಿಯಲಿಷ್ಟ'ನೆಂದು ತೀರ್ಮಾನಿಸಿಬಿಟ್ಟಿರುವರು. ಅವನ 'ಐಡಿಯಲಿಸ್ಮ್' ಎಲ್ಲಾ ಗುಟ್ಟಾಗಿ ಊರ್ಮಿಯ ಹಣದ ಗಂಟಿನ ನಡುವೆ ಮೊಟ್ಟೆ ಇಟ್ಟಿರುವುದು. ಈ ಸಂಗತಿ ಉದ್ಬುದ್ಧವಾದ ಸಾಧುವಾಕ್ಯಗಳಿಂದ ಮುಚ್ಚಿಡಲು ಸಾಧ್ಯವೇನು. ತನ್ನನ್ನು ಸ್ಯಾಕ್ರಿಫೈಸ್ (Sacrifice) ಮಾಡುವನಂತೆ. ಆದರೆ ಯಾವ ದೇವತೆಯ ಬಳಿ ಮಾಡಿರುವನೋ ಅವಳ ಮಂದಿರ ಇಂಪೀರಿಯಲ್ ಬ್ಯಾಂಕಿನಲ್ಲಿ. ನಾವುಗಳು ನೆಟ್ಟಗೆ ಒಂದು ಮಾತಿ

ನಲ್ಲಿ ಮಾವನಿಗೆ ಹೇಳುವವರು. ಹಣದ ಆವಶ್ಯಕತೆಯಿದೆ. ಅದು ನೀರಿನಲ್ಲಿ ಮುಳುಗದು. ನಿಮ್ಮ ಮಗಳ ಸೇವೆಗೇ ಉಪಯೋಗವಾಗುವದು ಎನ್ನುವೆವು. ಮಹಾನುಭಾವ ಮಹೋದ್ದೇಶದ ಸಾಧನೆಗಾಗಿ ಮದುವೆ ಮಾಡಿಕೊಳ್ಳುವನು. ಆ ಮೇಲೆ ಆ ಉದ್ದೇಶವನ್ನು ದಿನೇ ದಿನೇ ಮಾವನ ಚೆಕ್ ಪುಸ್ತಕದ ಹಾಳೆಯಲ್ಲಿ ತರ್ಜುಮೆ ಮಾಡುವನು" ಎಂದು ಅವರುಗಳು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಹೇಳುತ್ತಿದ್ದರು.

ಈ ತರಹದ ಮಾತುಕತೆಗಳು ತಡೆಯಲಸಾಧ್ಯವಾದುವೆಂದು ನೀರದ ಬಲ್ಲ. ಊರ್ಮಿಗೆ ಹೇಳಿದ- "ನನ್ನನ್ನು ಮದುವೆಯಾಗಲು ಒಂದು ನಿಯಮವಿದೆ. ನಿನ್ನ ಹಣದಿಂದ ಒಂದು ಕಾಸನ್ನೂ ತೆಗೆದುಕೊಳ್ಳೆನು. ಸ್ವಂತ ಸಂಪಾದನೆಯೇ ನನ್ನ ಆಧಾರವಾಗುವುದು. ಮಾವ ಅವನನ್ನು ಯೂರೋಪಿಗೆ ಕಳುಹಿಸುವ ಪ್ರಸ್ತಾಪವೆತ್ತಿದ್ದರು. ಅವನು ಖಂಡಿತ ಒಪ್ಪಲಿಲ್ಲ. ಅದಕ್ಕಾಗಿ ಬಹುದಿನಗಳು ಕಾಯಬೇಕಾಯಿತು. ಆಸ್ಪತ್ರೆಯ ಸ್ಥಾಪನೆಗಾಗಿ ಎಷ್ಟು ಹಣ ಕೊಡಬಯಸುವಿರೋ ಅಷ್ಟನ್ನೂ ನಿಮ್ಮ ಮಗಳ ಹೆಸರಿನಲ್ಲಿ ಕೊಡಿರಿ. ನಾನು ಆ ಆಸ್ಪತ್ರೆಯ ಯಾಜಮಾನ್ಯ ವಹಿಸಿಕೊಂಡಾಗ ಆ ಹಣದಿಂದ ಯಾವ ವಿಧವಾದ ಸಂಬಳವನ್ನೂ ತೆಗೆದುಕೊಳ್ಳೆನು ನಾನು ಡಾಕ್ಟರು. ನನ್ನ ಜೀವನಕ್ಕಾಗಿ ನನಗೆ ಯೋಚನೆಯಿಲ್ಲ."

ಈ ಅಪಾರ ನಿಸ್ಪೃಹತೆ ನೋಡಿ ಅವನ ಮೇಲೆ ರಾಜಾರಾಮರಿಗೆ ದೃಢಭಕ್ತಿ ಉಂಟಾಗಿತ್ತು. ಊರ್ಮಿ ಬಲು ಹೆಮ್ಮೆ ಪಡುತ್ತಿದ್ದಳು. ಈ ಹೆಮ್ಮೆಯ ನಿಜವಾದ ಕಾರಣವನ್ನು ಡಂಭದಿಂದ ತೋರಿಸುವುದನ್ನು ಕಂಡು ನೀರದನ ವಿಷಯದಲ್ಲಿ ಶರ್ಮಿಳೆಗೆ ಬೇಸರಿಕೆಯುಂಟಾಗಿತ್ತು. "ಸರಿ, ಈ ಜಂಭ ಎಷ್ಟು ದಿನ ನೆಲೆಸಿರುತ್ತೆ ನೋಡೋಣ" ಎಂದಳು. ಆಗಿನಿಂದ ನೀರದನು ಅಭ್ಯಾಸದಂತೆ ಅತ್ಯಂತ ಗಂಭೀರ ಭಾವದಿಂದ ಮಾತನಾಡುವಾಗ ಮಾತುಕತೆಯ ನಡುವೆ ಶರ್ಮಿಳೆ ಆಕಸ್ಮಾತ್ತಾಗಿ ಎದ್ದು ಮೈ ಕುಲುಕಿಸಿ ಕೊಠಡಿಯಿಂದ ಹೊರಗೆ ಹೋಗುವಳು. ಸ್ವಲ್ಪ ದೂರದವರೆಗೆ ಅವಳ ಹೆಜ್ಜೆಯ ಸದ್ದು ಕೇಳುತ್ತಿತ್ತು. ಊರ್ಮಿಯು ದಾಕ್ಷಿಣ್ಯದಿಂದ ಏನೂ ಹೇಳುತ್ತಿರಲಿಲ್ಲ. ಆದರೆ ಅವಳ ಏನೂ ಹೇಳದಿದ್ದುದರ ಅರ್ಥ ಸಾಕಷ್ಟು ಬಿಸಿಯಾಗಿ ಕಾಣುತ್ತಿತ್ತು.

ಮೊದಮೊದಲು ನೀರದ ಪ್ರತಿ ಅಂಚೆಯಲ್ಲೂ ನಾಲ್ಕೈದು ಹಾಳೆಗಳಷ್ಟು ವಿಸ್ತಾರವಾದ ಉಪದೇಶ ಬರೆದು ಕಳುಹುತ್ತಿದ್ದ. ಕೆಲ ದಿನಗಳ ನಂತರ ತಂತಿ

ಯೊಂದನ್ನು ಕಳುಹಿಸಿ ಆಶ್ಚರ್ಯದಲ್ಲಿ ಮುಳುಗಿಸಿದನು. ಓದುವುದರ ಪ್ರಯೋಜನಕ್ಕಾಗಿ ದೊಡ್ಡದಾದೊಂದು ಮೊತ್ತ ಹಣ ಬೇಕೆಂದು ಕೇಳಿದ್ದ. ಯಾವ ಹೆಮ್ಮೆ ಇದು ವರೆಗೆ ಊರ್ಮಿಯ ಬಂಡವಾಳವಾಗಿತ್ತೋ ಅದಕ್ಕೆ ಧಕ್ಕೆ ತಗಲಿತು. ಆದರೆ ಮನಸ್ಸಿನಲ್ಲಿ ಒಂದು ನೆಮ್ಮದಿಯೂ ಆಯಿತು. ದಿನ ಕಳೆದಂತೆ ನೀರದನು ಇಲ್ಲದಿರುವುದು ನಡೆದು ಬರುತ್ತಿರಲು ಊರ್ಮಿಯ ಕಹಳೆಯ ಸ್ವಭಾವ ಬೇಲಿಯಲ್ಲಿ ತನ್ನ ಹುಡುಕತೊಡಗಿತು. ತನ್ನನ್ನು ನಾನಾ ತಂತ್ರಗಳಿಂದ ಮೋಸಿಗೊಳಿಸುವಳು. ಪಶ್ಚಾತ್ತಾಪವನ್ನೂ ಪಡುವಳು. ಇಂತಹ ಆತ್ಮಗ್ಲಾನಿಯ ವೇಳೆಯಲ್ಲಿ ನೀರದನಿಗೆ ಹಣ ಸಹಾಯ ಮಾಡು ವುದು ಅವಳ ಪರಿತಪ್ತ ಮನಸ್ಸಿಗೆ ನೆಮ್ಮದಿಯುಂಟು ಮಾಡಿತು.

ಊರ್ಮಿ ಟೆಲಿಗ್ರಾಮನ್ನು ಮ್ಯಾನೇಜರ ಕೈಯಲ್ಲಿ ಕೊಟ್ಟು ಸಂಕೋಚ ದೊಡನೆ "ತಾತಯ್ಯ, ಹಣ" ಎಂದಳು.

ಮ್ಯಾನೇಜರ್ ಬಾಬುಗಳು- "ಆಶ್ಚರ್ಯವಾಗುತ್ತೆ, ಅವರಿಗಂತೂ ಹಣ ಮುಟ್ಟತಕ್ಕ ವಸ್ತುವಾಗಿರಲಿಲ್ಲವಲ್ಲ" ಎಂದನು. ಮ್ಯಾನೇಜರು ನೀರದನನ್ನು ಮೆಚ್ಚಿದವರಲ್ಲ.

ಊರ್ಮಿ ಎಂದಳು- "ಆದರೆ ವಿದೇಶದಲ್ಲಿ" ಮಾತು ಮುಗಿಸಲಿಲ್ಲ. ತಾತಯ್ಯನವರು "ಈ ದೇಶದ ಸ್ವಭಾವ ವಿದೇಶದ ಮಣ್ಣಿನಲ್ಲಿ ಮಾರ್ಪಡುವು ದೆಂಬ ಸಂಗತಿ ನಾನು ಚನ್ನಾಗಿ ಬಲ್ಲೆ. ಆದರೆ ನಾವುಗಳು ಅದರೊಡನೆ ತಾಳ ಕೂಡಿಸುವುದು ಹೇಗೆ" ಎಂದರು.

'ಹಣ ತಲುಪದಿದ್ದರೆ ಕಷ್ಟದಲ್ಲಿ ಸಿಕ್ಕುಕೊಳ್ಳುವರೇನೋ' ಎಂದು ಊರ್ಮಿ- ಹೇಳಿದಳು.

"ಆಗಲಿ ಒಳ್ಳೆಯದಮ್ಮ, ಕಳಿಸುತ್ತೇನೆ. ಒಂದು ಮಾತು ಹೇಳುತ್ತೇನೆ. ಇದೋ ಈಗ ಆರಂಭವಾಗಿದೆ. ಇಲ್ಲಿಗೇ ಮುಗಿಯದು."

ಮುಗಿಯಲಿಲ್ಲವೆಂಬ ಅಂಶ ಕೆಲದಿನಗಳ ನಂತರ, ಇನ್ನೂ ದೊಡ್ಡಮೊತ್ತ ಹಣ ಕಳುಹಿಸಬೇಕೆಂದು ಬಂದ ಬೇಡಿಕೆಯಿಂದ ಸಿದ್ಧವಾಯಿತು. ಈ ಸಾರಿ ದೇಹಾರೋಗ್ಯವನ್ನುದ್ದೇಶಿಸಿ ಹಣ ಬೇಡಿದ್ದನು. ಶಶಾಂಕ ಬಾಬುಗಳ ಹತ್ತರ ಸ್ವಲ್ಪ ಆಲೋಚಿಸುವುದು ಉತ್ತಮ' ಎಂದು ಮ್ಯಾನೇಜರು ಹೇಳಿದರು.

ಊರ್ಮಿ ಚಿತ್ತ ತತ್ತರಿಸಿದವಳಾಗಿ "ಏನೇ ಆಗಲಿ ಅಕ್ಕನ ಮನೆಯವ ರಿಗೆ ಈ ಸುದ್ದಿ ಖಂಡಿತ ತಿಳಿಯದಂತೆ ನೋಡಿಕೊಳ್ಳಬೇಕು" ಎಂದಳು.

"ಒಂಟಿಯಾಗಿ ಈ ಹೊಣೆ ಹೊರುವುದು ಒಳ್ಳೆಯದೆಂದು ಕಾಣುತ್ತಿಲ್ಲ."

"ಒಂದಾನೊಂದು ದಿನ ಹಣವೆಲ್ಲ ಅವರ ಕೈಗೇ ಸೇರುವುದಲ್ಲ."

"ಅವರ ಕೈಸೇರುವ ಮುಂಚೆ ನೀರಿನಲ್ಲಿ ಬೀಳದಂತೆ ನೋಡಿಕೊಳ್ಳಬೇಕು."

"ಆದರೆ ಅವರ ದೇಹಸ್ಥಿತಿಯ ವಿಷಯ ಯೋಚಿಸಬೇಕಾಗಿದೆಯಲ್ಲ."

"ಅನಾರೋಗ್ಯ ನಾನಾ ಜಾತಿಯದಿದೆ. ಇದು ಯಾವ ಜಾತಿಗೆ ಸೇರಿದ್ದೆಂದು ತೀರ್ಮಾನಿಸಲು ಸಾಧ್ಯವಿಲ್ಲ. ಇಲ್ಲಿಗೆ ಹಿಂದಿರುಗಿದರೆ ಹವಾ ಬದಲಾವಣೆಯಿಂದ ಆರೋಗ್ಯ ಹೊಂದಬಹುದು. ಹಿಂತಿರುಗಲು ಹಡಗಿನ ಖರ್ಚಿಗೆ ಏರ್ಪಾಡು ಮಾಡಬಹುದು."

ಹಿಂತಿರುಗುವ ಪ್ರಸ್ತಾಪದಿಂದ ಊರ್ಮಿ ಎಷ್ಟು ವಿಚಲಿತಳಾದಳೆಂದರೆ ಅದರಿಂದ ನೀರದನ ಉಚ್ಚ ಉದ್ದೇಶ ನಾಶವಾಗುವದೆಂದು ಹೆದರಿದಳು.

"ಈ ಸಾರಿಯೇನೋ ಹಣ ಕಳುಹಿಸುವೆನು. ಆದರೆ ಇದರಿಂದ ಡಾಕ್ಟರ್ ಬಾಬುಗಳ ದೇಹಸ್ಥಿತಿ ಇನ್ನೂ ಕೆಟ್ಟು ಹೋಗುವುದೆಂದು ತೋರುತ್ತೆ" ಎಂದು ತಾತಯ್ಯ ಹೇಳಿದರು.

ರಾಧಾಗೋವಿಂದ ಊರ್ಮಿಯ ಹತ್ತಿರದ ನೆಂಟ. ತಾತನ ಮಾತಿನ ಇಂಗಿತ ಅವನ ಮನಸ್ಸಿಗೆ ತಗುಲಿತು. ಸಂದೇಹವುಂಟಾಯಿತು. "ಅಕ್ಕನಿಗೆ ಈ ಸುದ್ದಿ ಹೇಳಬೇಕು" ಎಂದು ಯೋಚಿಸತೊಡಗಿದನು. "ಆವಶ್ಯಕವಾದಷ್ಟು ದುಃಖವೇಕೆ ಆಗುತ್ತಿಲ್ಲ" ಎಂದು ತನ್ನನ್ನು ಪ್ರಶ್ನಿಸತೊಡಗಿದನು.

ಈ ಸಮಯದಲ್ಲಿ ಶರ್ಮಿಳೆಯ ಕಾಯಿಲೆ ಯೋಚನೆಯನ್ನುಂಟು ಮಾಡಿತ್ತು. ಅವಳ ತಮ್ಮನ ಸಂಗತಿ ನೆನಪಾಗಿ ಹೆದರಿಕೆ ಉಂಟಾಗುತ್ತಿತ್ತು. ನಾನಾ ಡಾಕ್ಟರುಗಳು ನಾನಾ ದಿಕ್ಕುಗಳಿಂದ ವ್ಯಾಧಿಯ ಆವಾಸಗುಹೆಯನ್ನು ಪತ್ತೆ ಮಾಡಿ ಹೊರಗೆಡವಲು ಯತ್ನಿಸತೊಡಗಿದರು. ಶರ್ಮಿಳೆ ಸೊರಗಿದ ನಗುವಿನೊಡನೆ "ಸಿ. ಐಯ್. ಡಿ. ಗಳ ಕೈಯಿಂದ ಅಪರಾಧಿ ತಪ್ಪಿಸಿಕೊಳ್ಳುವನು. ನಿರಪರಾಧಿ ಏಟು ತಿಂದು ಸಾಯುವ" ಎಂದಳು.

"ದೇಹದ ಶೋಧನೆ ಶಾಸ್ತ್ರರೀತಿಯಾಗಿ ನಡೆಯಲಿ. ಆದರೆ ಏಟು ಬೇಕಾಗಿಲ್ಲ" ಎಂದು ಶಶಾಂಕನು ಚಿಂತಿತ ಮುಖದೊಡನೆ ಹೇಳಿದನು.

ಈ ಸಮಯದಲ್ಲೇ ಶಶಾಂಕನ ಕೈಯಲ್ಲಿ ಎರಡು ಭಾರೀ ಕೆಲಸ ಬಂದಿತ್ತು. ಒಂದು ಗಂಗೆಯ ಅರುಗಿನಲ್ಲಿ ಸೆಣಬಿನ ಕಾರ್ಖಾನೆ. ಇನ್ನೊಂದು

ಟಾಲೀಗಂಜಿನತ್ತ, ಮೀರ್‌ಪುರದ ಜಮೀಂದಾರರ ಗಾರ್ಡನ್‌ಹೌಸ್. ಸೆಣಬಿನ ಕಾರ್ಖಾನೆಯ ಕೂಲಿಗಳ ವಾಸದ ಮನೆ ಕಟ್ಟಲು ಮೂರು ತಿಂಗಳ ವಾಯಿದೆ ಇತ್ತು. ನಾನಾ ಸ್ಥಳಗಳಲ್ಲಿ ಕೆಲವು 'ಟ್ಯೂಬ್ ವೆಲ್'ಗಳನ್ನು ಕೊರೆಯಬೇಕಾಗಿತ್ತು. ಶಶಾಂಕನಿಗೆ ಸ್ವಲ್ಪವೂ ಬಿಡುವು ಇರಲಿಲ್ಲ. ಶರ್ಮಿಳೆಯ ಕಾಯಿಲೆಯ ಕಾರಣದಿಂದ ಅವನು ನಿಲ್ಲಬೇಕಾಗಿರುತ್ತಿತ್ತು. ಆದರೆ ಕೆಲಸದ ವಿಷಯವಾಗಿ ಛಟಪಟಿಸುವನು.

ಅವರುಗಳ ಮದುವೆಯಾಗಿ ಇಷ್ಟು ದಿನವಾಗಿತ್ತು. ಆದರೆ ಶರ್ಮಿಳೆಯ ದೇಹಸ್ಥಿತಿಯ ವಿಷಯವಾಗಿ ಶಶಾಂಕನು ಆಲೋಚಿಸಬೇಕಾದಂತಹ ಸಂದರ್ಭ ಎಂದೂ ಒದಗಿರಲಿಲ್ಲ. ಕೆಲಸವನ್ನು ಅರ್ಧದಲ್ಲಿ ಬಿಟ್ಟು ಹಿಂತಿರುಗಿ ನಿರುಪಾಯ ಭಾವದೊಡನೆ ಹಾಸಿಗೆಯ ಬಳಿ ಕೂರುವ. ತಲೆಯ ಮೇಲೆ ಕೈ ಇಡಿಸುವನು. ಹೇಗಿದೆಯೆಂದು ಕೇಳುವನು. ತಕ್ಷಣ ಶರ್ಮಿಳೆ "ನೀವು ಸುಮ್ಮನೆ ಆಲೋಚಿಸುತ್ತಿರಬೇಡಿ, ನಾನು ಚೆನ್ನಾಗಿರುವೆನು" ಎನ್ನುವಳು. ಅದು ನಂಬಿಕೆಯಾಗದು. ಆದರೆ ನಂಬುವುದೇ ಮನಸ್ಸಿನ ಆಶೆ ಎಂದು ಶಶಾಂಕನು ಶೀಘ್ರದಲ್ಲಿ ನಂಬಿ ನೆಮ್ಮದಿ ಹೊಂದುವನು.

ಶಶಾಂಕನು ಹೇಳಿದನು. "ಢೇನ್‌ಕನಾಲದ ರಾಜರ ದೊಡ್ಡದೊಂದು ಕೆಲಸ ನನ್ನ ಕೈಗೆ ಸಿಕ್ಕಿದೆ. ಪ್ಲ್ಯಾನಿನ ವಿಷಯವಾಗಿ ದಿವಾನರೊಡನೆ ಮಾತು ನಡೆಸಬೇಕಾಗಿದೆ. ಡಾಕ್ಟರು ಬರುವುದರೊಳಗೆ ಸಾಧ್ಯವಾದಷ್ಟು ಜಾಗ್ರತೆ ಹಿಂತಿರುಗುವೆ."

ಸಂಗಡಲೇ ಶರ್ಮಿಳೆ ಹೇಳಿದಳು "ನನ್ನಾಣೆ. ಅವಸರಪಟ್ಟು ಕೆಲಸ ಕೆಡಿಸಬೇಡಿ. ಅವರ ಊರಿಗೆ ನೀವು ಹೋಗುವುದು ಅವಶ್ಯಕವೆಂದು ನನಗೆ ತೋರುತ್ತಿದೆ ಖಂಡಿತ ಹೋಗಿ ಹೋಗದಿದ್ದರೆ ನಾನು ನೆಮ್ಮದಿಯಾಗಿರೆನು. ನನ್ನನ್ನು ನೋಡಿಕೊಳ್ಳಲು ಬೇಕಾದಷ್ಟು ಜನ ಇರುವರು."

ಭಾರೀ ಆಸ್ತಿ ಶೇಖರಿಸುವ ಸಂಕಲ್ಪ ಶಶಾಂಕನ ಮನಸ್ಸಿನಲ್ಲಿ ಹಗಲೂ ರಾತ್ರಿ ಎಚ್ಚರವಾಗಿದೆ. ಅವನನ್ನು ಆಕರ್ಷಿಸುತ್ತಿದುದು ಐಶ್ವರ್ಯವಲ್ಲ ದೊಡ್ಡಸ್ತಿಕೆ. ದೊಡ್ಡದಾದುದು ಯಾವುದನ್ನಾದರೂ ಕಟ್ಟುವುದೇ ಗಂಡಸಿನ ಹೊಣೆಗಾರಿಕೆ. ಹಣವು ತುಚ್ಛವಾದುದೆಂದು ಪರಿಗಣಿಸುವದು, ಅದರಿಂದ ಆಹನ್ಯ ಹನಿ ಕಾಲಕ್ಷೇಪ ಆಗುತ್ತಿರುವಾಗ ಮಾತ್ರ. ಅದರ ಗೋಪುರವನ್ನು ಎತ್ತರವಾಗಿ ಕಟ್ಟಲು ಸಾಧ್ಯವೆಂದು ಕಂಡಾಗ ಸರ್ವಸಾಧಾರಣರೂ ಆದನ್ನು

ಗೌರವಿಸುವರು. ಉಪಕಾರ ಮಾಡಲು ಸಾಧ್ಯವೆಂದಲ್ಲ; ಅದರ ದೊಡ್ಡಸ್ತಿಕೆಯನ್ನು ಪ್ರದರ್ಶಿಸಬಹುದು ಎಂದು. ಶರ್ಮಿಳೆಯ ತಲೆದೆಸೆಯಲ್ಲಿ ಕುಳಿತು ಶಶಾಂಕನ ಮನದಲ್ಲಿ ತಳಮಳವಾಗುತಿರುವಾಗಲೂ ತನ್ನ ಕೆಲಸದಲ್ಲಿ ಎಲ್ಲಿ ಕೆಡಕಾಗುವ ಸಂಭವವಿದೆಯೆಂಬ ಸಂಗತಿಯನ್ನು ಅವನು ಯೋಚಿಸದೆ ಇರಲಾರ. ಶಶಾಂಕನ ಈ ಯೋಜನೆ ಜಿಪುಣನ ಯೋಜನೆಯಲ್ಲವೆಂಬುದನ್ನು ಶರ್ಮಿಳೆ ಚನ್ನಾಗಿ ಬಲ್ಲಳು. ತನ್ನ ಸ್ಥಿತಿಯನ್ನು ಕೆಳಗಿನ ಅಂತಸ್ತಿನಿಂದ ತುಟ್ಟ ತುದಿಗೆ ಎತ್ತಲು ಆಶಿಸುವ ಪೌರುಷದ ಯೋಜನೆ ಇದು. ಶಶಾಂಕನ ಈ ಗೌರವದಿಂದ ಶರ್ಮಿಳೆಯೂ ಗೌರವವುಳ್ಳವಳಾಗುವಳು. ಆದ್ದರಿಂದಲೇ ಗಂಡನು ತನ್ನ ಕಾಯಿಲೆಯ ಉಪಚಾರದಿಂದ ಕೆಲಸದಲ್ಲಿ ಆಲಸ್ಯ ತೋರುತ್ತಿರುವುದು ಅವುಗಳಿಗೆ ಸುಖಕರವಾಗಿದ್ದರೂ ಮನಸ್ಸಿಗೆ ನೆಮ್ಮದಿಯನ್ನು ಉಂಟು ಮಾಡಿರಲಿಲ್ಲ. ಅವನನ್ನು ಮತ್ತೆ ಮತ್ತೆ ಒತ್ತಾಯ ಮಾಡಿ ಕೆಲಸಕ್ಕೆ ಕಳಿಸುತ್ತಿದ್ದಳು.

ಇತ್ತ ತನ್ನ ಕರ್ತವ್ಯದ ವಿಷಯದಲ್ಲಿ ಶರ್ಮಿಳೆಯ ಕಾತರತೆಗೆ ಎಲ್ಲೆಯೇ ಇಲ್ಲ. ಆವಳು ಹಾಸಿಗೆ ಹಿಡಿದಿರುವಳು. ಅಡಿಗೆಯವ, ಪರಿಚಾರಕರು ಏನು ಮಾಡುವರೋ ಯಾರು ಬಲ್ಲರು. ಅಡಿಗೆಯಲ್ಲಿ ಒಳ್ಳೆಯ ತುಪ್ಪ ಉಪಯೋಗಿಸುವರೇ? ಸ್ನಾನದ ಮನೆಯಲ್ಲಿ ಸಕಾಲದಲ್ಲಿ ಬಿಸಿನೀರು ಒದಗಿಸುವರೋ ಇಲ್ಲವೋ ? ಹಾಸಿಗೆಯ ಮಗ್ಗಲುಹಾಸಿಗೆಗಳನ್ನು ಬದಲಾಯಿಸಿರುವರೇ ? ಬಚ್ಚಲುಗಳನ್ನು ಗುಡಿಸುವವನು ಉಜ್ಜಿ ತೊಳೆಯುತ್ತಿರುವನೆ? ಅಗಸನ ಮನೆಯಿಂದ ಬಂದ ಮಡಿ ಬಟ್ಟೆಗಳನ್ನು ಪಟ್ಟಿಯಂತೆ ನೋಡಿ ತೆಗೆದುಕೊಳ್ಳದಿದ್ದರೆ ಏನು ಹೆಚ್ಚುಕಡಮೆಯಾಗುವದೋ ಯಾರು ಬಲ್ಲರು. ಸುಮ್ಮನಿರಲಾರಳು.ಗುಟ್ಟಾಗಿ ಹಾಸಿಗೆಯಿಂದೆದ್ದು ವಿಚಾರಣೆಗೆ ಹೋಗುವಳು. ವೇದನೆ ಹೆಚ್ಚುವುದು. ಜ್ವರ ಏರುವದು. ಎಷ್ಟು ಯೋಚಿಸಿದರೂ ಡಾಕ್ಟರಿಗೆ ಇದರ ಕಾರಣ ಅರ್ಥವಾಗದು.

ಕೊನೆಗೆ ಊರ್ಮಿಮಾಲೆಯನ್ನು ಅವರ ಅಕ್ಕ ಕರೆಯಕಳುಹಿಸಿದಳು. "ಕೆಲವು ದಿನಗಳ ಮಟ್ಟಿಗೆ ನಿನ್ನ ಕಾಲೇಜು ಇರಲಿ. ನನ್ನ ಸಂಸಾರವನ್ನು ಕಾಪಾಡು. ತಂಗಿ ಇಲ್ಲದಿದ್ದರೆ ನಿಶ್ಚಿಂತಳಾಗಿ ಸಾಯಲಾರೆ" ಎಂದಳು.

ಈ ಕತೆ ಓದುವವರು ಈ ಸಂಗತಿ ಓದಿ ಹುಸಿನಗೆ ನಗುವರೆಂದು ನಾನು ಬಲ್ಲೆ. ಅದನ್ನು ಅರಿಯಲು ಅತಿ ಹೆಚ್ಚು ಬುದ್ಧಿಯ ಆವಶ್ಯಕತೆಯಿಲ್ಲ. ಯಾವುದು ಘಟಿಸಬೇಕೋ ಅದೇ ಘಟಿಸುವುದು. ಅಷ್ಟೇ ಯಥೇಷ್ಟ.

ಅದೃಷ್ಟ ಶರ್ಮಿಳೆಯ ಕಣ್ಣಿಗೆ ಮಣ್ಣೆರಚಿ ದಾಯವನ್ನು ಮುಚ್ಚಿ ಆಡುತ್ತಿದೆ ಯೆನ್ನಬಹುದು.

ಅಕ್ಕನ ಸೇವೆ ಮಾಡಲು ಹೋಗುವೆನೆಂದು ಊರ್ಮಿಯ ಮನದಲ್ಲಿ ಅತ್ಯಂತ ಉತ್ಸಾಹವುಂಟಾಯಿತು. ಈ ಕರ್ತವ್ಯವನ್ನು ಪಾಲಿಸಲು ಇತರ ಕೆಲಸಗಳನ್ನೆಲ್ಲಾ ಒತ್ತಟ್ಟಿಗೆ ಇಡಲೇಬೇಕು. ಬೇರೆ ದಾರಿಯಿಲ್ಲ. ಅಲ್ಲದೆ ಈ ಶುಶ್ರೂಷೆಯ ಕೆಲಸ ಅವಳ ಭವಿಷ್ಯತ್ತಿನ ಡಾಕ್ಟರೀ ಕೆಲಸಕ್ಕೆ ಸಂಬಂಧಿಸಿದ್ದೇ ಅಲ್ಲವೆ! ಅವಳ ಮನಸ್ಸಿನಲ್ಲಿ ಈ ತರ್ಕವೂ ತಲೆಯೆತ್ತಿತ್ತು.

ಆಡಂಬರದೊಡನೆ ಚರ್ಮದ ಬೈಂಡು ಮಾಡಿದ ನೋಟ್‌ಬುಕ್ ಒಂದನ್ನು ತೆಗೆದುಕೊಂಡಳು. ಅದರಲ್ಲಿ ಕಾಯಿಲೆಯ ನಿತ್ಯಗಟ್ಟಲೆಯ ಉಬ್ಬರವಿಳಿತಗಳನ್ನು ಗುರ್ತಿಸಲು ಅನುಕೂಲಿಸುವ ಕಟ್ಟಿಗಳಿದ್ದುವು. ಡಾಕ್ಟರು ಎಲ್ಲಾದರೂ ಅರಿಯದವಳೆಂದು ಹೇಳಿಬಿಡುವರೆಂದು ಎಣಿಸಿ ಅಕ್ಕನ ಕಾಯಿಲೆಯ ವಿಷಯದಲ್ಲಿ ಸಿಕ್ಕುವ ಪುಸ್ತಕಗಳನ್ನೆಲ್ಲ ಓದತೊಡಗಿದಳು. ಎಂ. ಎಸ್. ಸಿ. ಪರೀಕ್ಷೆಗೆ ಶರೀರತತ್ವವನ್ನು ಅರಿಸಿಕೊಂಡಿದ್ದಳು, ಈ ಕಾರಣದಿಂದ ರೋಗತತ್ವದ ಪಾರಿಭಾಷಿಕ ಶಬ್ದಗಳನ್ನು ಅರಿಯಲು ಅವಳಿಗೆ ಕಷ್ಟವಾಗಲಿಲ್ಲ. ಅರ್ಥಾತ್ ಅಕ್ಕನ ಸೇವೆಯ ಕಾರಣದಿಂದ ಅವಳ ಕರ್ತವ್ಯಸೂತ್ರ ಛಿನ್ನವಾಗದೆ ಇನ್ನೂ ಹೆಚ್ಚು ಆಸಕ್ತಿಯೊಡನೆ ಅದನ್ನು ಅನುಸರಿಸಲು ಸಾಧ್ಯವೆಂದು ತೀರ್ಮಾನಿಸಿ ತನ್ನ ಓದುವ ಪುಸ್ತಕಗಳನ್ನು ಚೀಲದಲ್ಲಿ ತುರುಕಿ ಭವಾನೀಪುರದ ಮನೆಗೆ ಬಂದು ಸೇರಿದಳು. ಅಕ್ಕನ ಕಾಯಿಲೆಯ ವಿಷಯದಲ್ಲಿ ರೋಗ ತತ್ವದ ಸಂಬಂಧವಾದ ದಪ್ಪ ಪುಸ್ತಕವನ್ನು ತಿರುವಿ ಹಾಕಲು ಅವಕಾಶ ಸಿಕ್ಕಲಿಲ್ಲ. ಯಾಕೆಂದರೆ ವಿಶೇಷಜ್ಞರುಗಳೂ ಕಾಯಿಲೆಯ ಮೂಲವನ್ನು ಅರಿಯಲಾರದೆ ಹೋದರು.

ತನಗೆ ಶಾಸನ ಕರ್ತಳ ಕೆಲಸ ಸಿಕ್ಕಿತೆಂದು ಊರ್ಮಿ ಭಾವಿಸಿದಳು. ಆದ್ದರಿಂದಲೇ ಅವಳು ಗಂಭೀರ ಮುಖದಿಂದ ಅಕ್ಕನೊಡನೆ "ಡಾಕ್ಟರ ಮಾತು ನಡೆಯುವಂತೆ ನೋಡುವ ಹೊಣೆ ನನ್ನದು. ನಾನು ಈಗಲೇ ನಿನಗೆ ಹೇಳಿದೇನೆ. ನನ್ನ ಮಾತಿನಂತೆ ನಡೆಯಲೇಬೇಕು" ಎದಂಳು.

ಅಕ್ಕನು ಅವಳ ಹೊಣೆಗಾರಿಕೆಯ ಆಡಂಬರ ನೋಡಿ ನಕ್ಕು "ಆಹಾ-ಅಕಸ್ಮಾತ್ತಾಗಿ ಇಷ್ಟು ಗಂಭೀರವನ್ನೇ ಯಾವ ಗುರುವಿನ ಹತ್ತಿರ ಕಲಿತೆ. ನೂತನ ದೀಕ್ಷೆಯಾದ್ದರಿಂದಲೇ ಇಷ್ಟೊಂದು ಉತ್ಸಾಹ. ನನ್ನ ಮಾತು

ಕೇಳುತ್ತೀಯೆಂದೆ; ನಿನ್ನನ್ನು ಕರೆಕಳುಹಿಸಿರುವುದು. ನಿನ್ನ ಆಸ್ಪತ್ರೆ ಇನ್ನೂ ಸ್ಪಷ್ಟ ಆಗಿಲ್ಲ. ನನ್ನ ಗೃಹಕೃತ್ಯ ಸಿದ್ಧವಾಗಿದೆ. ಮೊದಲು ಅದರ ಹೊಣೆ ಹೊರು. ನಿನ್ನ ಅಕ್ಕನಿಗೆ ಸ್ವಲ್ಪ ವಿರಾಮ ಸಿಕ್ಕಲಿ"ಎಂದಳು.

ರೋಗ ಶಯ್ಯೆಯ ಪಕ್ಕದಿಂದ ಊರ್ಮಿಯನ್ನು ಬಲಾತ್ಕಾರದಿಂದ ಅವರ ಅಕ್ಕ ದೂರ ಸರಿಸಿದಳು.

ಇಂದು ಅಕ್ಕನ ಗೃಹರಾಜ್ಯದಲ್ಲಿ ಪ್ರತಿನಿಧಿಯ ಪದವಿ ಅವಳದು. ಅಲ್ಲಿ ಅರಾಜಕತೆ ಘಟಿಸುತಿದೆ. ಶೀಘ್ರದಲ್ಲಿ ಅದಕ್ಕೆ ಪ್ರತಿವಿಧಾನ ಅವಶ್ಯಕ. ಈ ಕುಟುಂಬದ ಸರ್ವೋಚ್ಚ ಶಿಖರದ ಮೇಲೆ ಒಬ್ಬ ಗಂಡಸು ನೆಲೆಸಿರುವನಲ್ಲಾ ಅವನ ಶುಶ್ರೂಷೆಯಲ್ಲಿ ಎಳ್ಳಷ್ಟೂ ಲೋಪ ಒದಗಬಾರದು. ಈ ಉದ್ದೇಶ ನೆರವೇರಿಸುವದೇ ಈ ಮನೆಯಲ್ಲಿ ಸಣ್ಣವರು ದೊಡ್ಡವರು ಏಕಮಾತ್ರ ಧ್ಯೇಯ ವಾಗಿರಬೇಕು. ಆ ಮನುಷ್ಯ ಸಂಪೂರ್ಣ ಕೈಲಾಗದವನು. ತನ್ನ ಶರೀರ ವನ್ನು ಕಾಪಾಡಿಕೊಳ್ಳುವುದರಲ್ಲಿ ಶೋಚನೀಯ ಭಾವದ ಸೋಮಾರಿ ಎಂಬ ನಂಬಿಕೆ ಶರ್ಮಿಳೆಯ ಮನಸ್ಸಿನಿಂದ ಯಾವ ವಿಧದಲ್ಲೂ ದೂರವಾಗದು. ಚುಟ್ಟದ ಬೆಂಕಿ ಈ ಗೃಹಸ್ತನ ಶರ್ಟಿನ ಸ್ವಲ್ಪಭಾಗ ಸುಟ್ಟಾಗ ನಗುಬರುವುದು. ಅದರೊಡನೆ ಮನಸ್ಸು ಸ್ನೇಹದಿಂದ ಆರ್ದ್ರವೂ ಆಗುವುದು. ಮುಂಜಾನೆಯ ವೇಳೆ ಮಲಗುವ ಮನೆಯ ಮೂಲೆಯ ನಲ್ಲಿ ತಿರುಗಿಸಿ ಮುಖ ತೊಳೆದು ಇಂಜನೀಯರು ಕೆಲಸದ ಆತುರದಲ್ಲಿ ಹೊರಗೆ ಓಡಿರುವರು ಹಿಂತಿರುಗಿ ಬಂದು ನೋಡಿದರೆ ಕೋಣೆಯೆಲ್ಲಾ ಜಲಪ್ರಳಯವಾಗಿರುವುದು ಜಮಖಾನ ಕೆಟ್ಟು ಹೋಗಿರುವದು. ಈ ಜಾಗದಲ್ಲಿ ನಲ್ಲಿ ಇಡಿಸಬೇಡಿರೆಂದು ಆರಂಭ ದಲ್ಲೇ ಶರ್ಮಿಳೆ ಆಕ್ಷೇಪಿಸಿದ್ದಳು. ಹಾಸಿಗೆಯ ಹತ್ತಿರದಲ್ಲೇ ನಲ್ಲಿಯಿದ್ದರೆ ಈ ಗೃಹಸ್ಥನಿಂದ ನಿತ್ಯ ಜಲಪ್ರಳಯವಾಗದೆ ತಪ್ಪದೆಂಬುದನ್ನು ಬಲ್ಲಳು.ಆದರೆ ಭಾರೀ ಇಂಜಿನಿಯರು. ವೈಜ್ಞಾನಿಕ ಸೌಕರ್ಯಗಳ ಹೆಸರಿನಲ್ಲಿಎಷ್ಟೊಂದು ಅನಾ ನುಕೂಲಗಳನ್ನು ಇನ್ನೂ ತೊಡಕುಮಾಡುವುದರಲ್ಲೇ ಅವನಿಗೆ ಉತ್ಸಾಹ ಒಮ್ಮೆ ತಲೆಯಲ್ಲಿ ಹೊಳೆಯಿತು. ತನ್ನ ಸ್ವಂತ ಪ್ಲಾನಿನಂತೆ ಒಲೆ ಕಟ್ಟಿಸ ಬೇಕೆಂದು ತೀರ್ಮಾನಿಸಿದ. ಕೆಲಸ ಆರಂಬಿಸಿದ. ಅದರ ಇತ್ತಕಡೆ ಬಾಗಿಲು, ಅತ್ತಕಡೆ ಬಾಗಿಲು, ಈ ದಿಕ್ಕಿನಲ್ಲಿ ಒಂದು ಕಿಂಡಿ ಆ ದಿಕ್ಕಿನಲ್ಲಿ ಒಂದು. ಒಂದು ಕಡೆ ಉರಿ ವ್ಯರ್ಥವಾಗಿ ಹೋಗದೆ ಉರಿಯುವ ಏರ್ಪಾಡು ಇನ್ನೊಂದು ಕಡೆ ಇಳಿಜಾರು ದಾರಿಯಲ್ಲಿ ಬೂದಿ ನಿಶ್ಶೇಷವಾಗಿ ಕೆಳಗೆ ಬೀಳುವುದು. ಆ ಮೇಲೆ ಸುಡಲು, ಹುರಿಯಲು, ಬೇಯಿಸಲು, ನೀರು ಬಿಸಿ ಮಾಡಲು ನಾನಾ

ಆಕಾರದ ವಿಚಿತ್ರ ಗುಹಾಗಹ್ವರಗಳು. ಈ ಯಂತ್ರವನ್ನು ಉತ್ಸಾಹದ ಭಾವ ಮತ್ತು ಭಾಷೆಗಳಿಗಾಗಿಯೇ ಅಂಗೀಕರಿಸಬೇಕಾಗಿತ್ತು. ಉಪಯೋಗಕ್ಕಾಗಲ್ಲ ನೆಮ್ಮದಿಯಿಂದಿರುವುದಕ್ಕಾಗಿ. ಬೆಳೆದ ಮಗುವಿನ ಈ ಆಟ. ಅಡ್ಡಿ ಮಾಡಿದರೆ ಅನರ್ಥವಾದೀತು. ಎರಡು ದಿನಗಳಲ್ಲಿ ಮರೆತು ಹೋಗುವ ಸಂಗತಿ. ಬಹು ಕಾಲದಿಂದ ನಡೆದು ಬರುತ್ತಿರುವ ಪದ್ಧತಿಗೆ ಮನಸ್ಸು ಒಪ್ಪದು. ಏನೋ ಒಂದು ಹೊಸದನ್ನು ಸೃಷ್ಟಿಸಬೇಕು. ಮತ್ತೆ ಹೆಂಗಸಿನ ಕರ್ತವ್ಯ ಬಾಯಲ್ಲಿ ಅವನ ಅಭಿಪ್ರಾಯಕ್ಕೆ ಹೂಗುಟ್ಟುವುದು, ಕೆಲಸ ಮಾಡುವಾಗ ತನ್ನ ಮನಸ್ಸಿನಂತೆ ಮಾಡುವುದು. ಗಂಡನನ್ನು ಸಾಕುವ ಈ ಉಪಾಯವನ್ನು ಶರ್ಮಿಳೆ ಚೆನ್ನಾಗಿ ಬಲ್ಲಳು.

ಇಷ್ಟು ಕಾಲ ಕಳೆದಿದೆ. ತನ್ನನ್ನು ಬಿಟ್ಟು ಶಶಾಂಕನ ಜಗತ್ತು ಶರ್ಮಿಳೆಯ ಊಹೆಗೆ ನಿಲುಕದ ವಿಷಯ. ಇಂದು ಮೃತ್ಯುವಿನ ದೂತ ಬಂದು ಜಗತ್ತು ಮತ್ತು ಜಗದ್ಧಾತ್ರಿಯರ ನಡುವೆ ವಿಚ್ಛೇದ ಉಂಟುಮಾಡುವನೆಂಬ ಹೆದರಿಕೆ. ಇಷ್ಟೇ ಅಲ್ಲ, ಸತ್ತನಂತರವೂ ಶಶಾಂಕನ ದೈಹಿಕ ಅಸಹಾಯತೆ ಶರ್ಮಿಳೆಯ ದೇಹಹೀನ ಆತ್ಮವನ್ನು ಶಾಂತಿಹೀನವಾಗಿಡುವುದೆಂದು ಅವಳ ಹೆದರಿಕೆ. ಪುಣ್ಯಕ್ಕೆ ಊರ್ಮಿ ಇರುವಳು. ಅವಳು ತನ್ನಂತೆ ಶಾಂತ ಸ್ವಭಾವದವಳಲ್ಲ. ಆದರೂ ತನ್ನವಳಾಗಿ ಕೆಲಸ ನಿಭಾಯಿಸುವಳು. ಆ ಕೆಲಸವೂ ಹೆಮ್ಮಕ್ಕಳ ಕೈಯಿಂದ ಸಾಧ್ಯವಾಗುವ ಕೆಲಸವೇ. ಆ ಸ್ನಿಗ್ಧ ಹಸ್ತಗಳ ಸ್ಪರ್ಶವಾಗದಿದ್ದರೆ ಪುರುಷರ ದೈನಂದಿನ ಜೀವನದ ಪ್ರಯೋಜನದಲ್ಲಿ ರಸವಿರದು. ಸಮಸ್ತವೂ ಶ್ರೀಹೀನವಾದಂತೆ ತೋರುವುದು ಆದ್ದರಿಂದಲೇ ಊರ್ಮಿ ತನ್ನ ಅಂದವಾದ ಕೈಗಳಿಂದ ಸೇಬಿನ ಹಣ್ಣಿನ ಸಿಪ್ಪೆ ತೆಗೆದು ತುಂಡು ಮಾಡಿ ಇಟ್ಟಾಗ, ಕಿತ್ತಳೆ ಹಣ್ಣಿನ ಸಿಪ್ಪೆ ಸುಲಿದು ತೊಳೆಗಳನ್ನು ಅಣಿ ಮಾಡಿಟ್ಟಾಗ ಶರ್ಮಿಳೆ ತನ್ನ ತಂಗಿಯಲ್ಲಿ ತನ್ನನ್ನೇ ಕಂಡುಕೊಂಡಂತೆ ಭಾವಿಸುವಳು. ಹಾಸಿಗೆಯಲ್ಲಿ ಮಲಗಿಯೇ ಸದಾ ಅವಳಿಗೆ ಕೆಲಸದ ವಿಷಯದಲ್ಲಿ ಸಲಹೆ ಕೊಡುವಳು.

"ಅವರ ಸಿಗರೇಟ್‌ಕೇಸ್ ತುಂಬಿಡು ಊರ್ಮಿ"

'ನೋಡಿದಿಯೋ ಕೊಳಕು ಕೈವಸ್ತ್ರ ಬದಲಾಯಿಸವುದು ಮರೆತೆ.'

"ಅದೋ ನೋಡು; ಬೂಟ್ಸನಲ್ಲಿ ಸೀಮೆಂಟ ಮರುಳು ತುಂಬಿ ಹಾಳಾಗಿದೆ. ಆಳಿಗೆ ಅದನ್ನು ಚೊಕ್ಕಟ ಮಾಡಿ ಇಡುವಂತೆ ಹೇಳಬೇಕೆಂಬ ಅರಿವೇ ಅವರಿಗಿಲ್ಲ."

"ಒಮ್ಮೆ ಆಫೀಸ್‌ರೂಮ್ ನೋಡಿ ಬಾ ಊರ್ಮಿ, ಅವರು ಕ್ಯಾಷ್ ಬಾಕ್ಸಿನ ಬೀಗದ ಕೈಯನ್ನು ಮೇಜಿನ ಮೇಲೆಯೇ ಬೀಸಾಡಿ ಹೊರಟು ಹೋಗಿರುವರು ಎಂದು ನಾನು ಖಂಡಿತ ಬಲ್ಲೆ."

"ಹೂವುಕೋಸಿನ ಸಸಿಗಳನ್ನು ನಾಟಿ ಹಾಕುವ ಸಮಯ, ಜ್ಞಾಪಕ ಇರಲಿ. ಮಾಲೀಗೆ ಹೇಳು. ಗುಲಾಬಿ ಗಿಡದ ಕೊನೆಗಳನ್ನು ಕತ್ತರಿಸಲಿ"

"ಅಲ್ಲಿ ನೋಡು. ಕೋಟಿನ ಬೆನ್ನಿನಲ್ಲಿ ಸುಣ್ಣ. ಇಷ್ಟು ಅವಸರಪಟ್ಟರೆ ಹೇಗೆ. ಸ್ವಲ್ಪ ನಿಲ್ಲಿ ಮತ್ತೆ- ಊರ್ಮಿ- ಸ್ವಲ್ಪ ಬ್ರಷ್ ಮಾಡಮ್ಮ ಮತ್ತೆ–

ಊರ್ಮಿ ಓದು ಕಲಿತ ಹುಡುಗಿ. ಕೆಲಸ ಮಾಡಿದ ಹುಡುಗಿಯಲ್ಲ. ಆದರೂ ಮಹಾ ಸಂತೋಷಪಡುವಳು. ಅವಳಿದ್ದ ಕಠಿಣ ನಿಯಮದ ಆವ ರಣದಿಂದ ಹೊರಬಿದ್ದುದರಿಂದ ಕೆಲಸ ಕಾರ್ಯ ಎಲ್ಲಾ ನಿಯಮತಪ್ಪಿದ ಹಾಗೆ ಕಾಣುತ್ತಿತ್ತು. ಈ ಕುಟುಂಬದ ಕರ್ಮಧಾರೆಯ ಅಂತ್ಯದಲ್ಲಿರುವ ಉದ್ವೇಗ, ಸಾಧನೆ ಇವು ಅವಳ ಅರಿವಿನಲ್ಲಿಲ್ಲ. ಆ ಆಲೋಚನೆಯ ಸೂತ್ರ ಅವಳ ಅಕ್ಕನ ಪಾಲು. ಆದ್ದರಿಂದಲೆ ಅವಳಿಗೆ ಈ ಕೆಲಸವೆಲ್ಲಾ ಆಟವಾಗಿತ್ತು. ಒಂದು ವಿಧವಾದ ವಿರಾಮದ ಹಾಗೆ ಉದ್ದೇಶವಿಲ್ಲ ಉದ್ಯೋಗವಾಗಿತ್ತು. ಇಷ್ಟು ದಿನ ಅವಳು ಎಲ್ಲಿ ಇದ್ದಳೋ ಆ ಜಗತ್ತಿನಿಂದ ಇದು ಸಂಪೂರ್ಣ ಬೇರೆಯಾದದ್ದು. ಇಲ್ಲಿ ಅವಳಿದಿರಿನಲ್ಲಿ ಯಾವ ಗುರಿಯೂ ಬೆರಳು ತೋರಿ ಸುತ್ತಿಲ್ಲ. ಆದರೂ ದಿನ ಕೆಲಸಗಳಿಂದ ತುಂಬಿದೆ. ಆ ಕೆಲಸಗಳೂ ವಿಚಿತ್ರ ನಾದಃವು ಮರೆವಾಗುವುದು. ಕಷ್ಟಾಗುವುದು. ಅದಕ್ಕಾಗಿ ಕಠಿಣವಾದ ಜವಾಬುದಾರಿಯಿಲ್ಲ. ಅಕ್ಕ ಸ್ವಲ್ಪ ಗದರಿಸಲು ಯತ್ನಿಸುವಳು. ಆದರೆ ಶಶಾಂಕ ಊರ್ಮಿಯ ತಪ್ಪುಗಳಲ್ಲಿ ಒಂದು ವಿಶೇಷ ರಸ ಇದೆ ಎನ್ನುವಂತೆ ಅದನ್ನು ನಗುವಿನಲ್ಲಿ ಹಾರಿಸಿ ಬಿಡುವನು. ವಾಸ್ತವ್ಯದಲ್ಲಿ ಇವರ ಕುಟುಂಬ ದಲ್ಲಿ ಈಚೆಗೆ ಹೊಣೆಗಾರಿಕೆಯ ಗಾಂಭೀರ್ಯ ಹೋಗಿ ಬಿಟ್ಟಿದೆ. ತಪ್ಪು ನೆಪ್ಪುಗಳಿಂದ ಏನೂ ನಷ್ಟವಿಲ್ಲ ಎನ್ನುವ ಭಾವನೆ ತಲೆ ಹಾಕಿದೆ. ವನಭೋಜನ ಸಂತೋಷಕೂಟ ನಡೆಯುವಂತೆ ಮನಸ್ಸಿಗೆ ಅನಿಸುತ್ತೆ. ಊರ್ಮಿ ಯಾವುದ ರಿಂದಲೂ ಚಿಂತಿತಳಾಗಳು, ದುಃಖಿತಳಾಗಳು, ನಾಚಿಕೆಪಡಳು. ಎಲ್ಲದ ರಿಂದಲೂ ಉತ್ಸಾಹಭರಿತಳಾಗುವಳು. ಇದರಿಂದ ಶಶಾಂಕನ ಮನಸ್ಸಿನಿಂದ ಅವನ ಕೆಲಸದ ಹೊರೆಯನ್ನು ಹಗುರವಾಗಿಸುವಳು. ಕೆಲಸ ಮುಗಿದ ಕೂಡಲೇ ಆಷ್ಟೇಕೆ, ಮುಗಿಯುವ ಮುಂಚೆಯೇ ಮನೆ ಹಿಂತಿರುಗಲು ಅವನ ಮನಸ್ಸು ಹಾತೊರೆಯುವುದು.

ಊರ್ಮಿ ಕೆಲಸದಲ್ಲಿ ಚುರುಕಲ್ಲವೆಂದು ಒಪ್ಪಲೇ ಬೇಕು. ಆದರೆ ಒಂದು ಸಂಗತಿ ಯೋಚಿಸಿದರೆ ಕೆಲಸದಿಂದ ಅಲ್ಲವಾದರೂ ತನ್ನನ್ನು ಅರ್ಪಿಸಿಯಾದರೂ ಈ ಕುಟುಂಬದ ಒಂದು ಅಭಾವವನ್ನು ಅವಳು ತುಂಬಿದ್ದಳೆಂದು ಒಪ್ಪದೆ ದಾರಿಯಿಲ್ಲ. ಆ ಅಭಾವ ಏನು ಎನ್ನುವುದನ್ನ ಗೊತ್ತಾದ ರೀತಿಯಲ್ಲಿ ಹೇಳುವುದು ಅಸಾಧ್ಯ. ಆದ್ದರಿಂದ ಶಶಾಂತ ಮನೆಗೆ ಹಿಂತಿರುಗಿದಾಗ ಅಲ್ಲಿ ಒಂದು ಗಾಳಿಯ ಸೊಂಕನ್ನು ಅನುಭಸುವನು. ವಾಸ್ತವ್ಯದಲ್ಲಿ ಊರ್ಮಿಯ ಸ್ವಂತ ವಿರಾಮದ ಆನಂದ ಇಲ್ಲಿಯ ಶೂನ್ಯವನ್ನೆಲ್ಲಾ ಪೂರ್ಣಗೊಳಿಸುತ್ತಿತ್ತು. ಹಗಲು ರಾತ್ರಿಗಳನ್ನು ಚಂಚಲಗೊಳಿಸುತ್ತಿತ್ತು. ಆ ಶಾಶ್ವತ ಚಂಚಲತೆ ಕೆಲಸದಿಂದ ದಣಿದ ಶಶಾಂಕನ ರಕ್ತವನ್ನು ಕುಲುಕುತ್ತಿತ್ತು. ಊರ್ಮಿಯ ಇರುವಿಕೆಯಿಂದ ಶಶಾಂಕ ಆನಂದಪಡುವನು. ಆ ಪ್ರತ್ಯಕ್ಷ ಲಾಭವೇ ಊರ್ಮಿಗೆ ಸಂತೋಷವುಂಟು ಮಾಡುತ್ತಿತ್ತು. ಇಷ್ಟು ದಿನಗಳೂ ಊರ್ಮಿಗೆ ಆ ಸುಖ ದೊರಕಿರಲಿಲ್ಲ. ತಾನು ಇದ್ದ ಮಾತ್ರಕ್ಕೆ ಯಾರನ್ನಾದರೂ ಆನಂದಪಡಿಸಬಹುದೆಂಬ ಸತ್ಯ ಅನೇಕ ದಿನ ಅವಳಿಗೆ ತಿಳಿದಿರಲಿಲ್ಲ, ಇದರಿಂದ ಅವಳ ಯತಾರ್ಥ ಗೌರವದ ಹಾನಿಯುಂಟಾಗಿತ್ತು,

ಶಶಾಂಕನ ಊಟ ಉಡಿಗೆಗಳು ಪದ್ಧತಿಯಂತೆ ನಡೆಯುತ್ತಿವೆಯೋ ಇಲ್ಲವೋ, ಸಕಾಲದಲ್ಲಿ ಬೇಕಾದ ವಸ್ತುಗಳು ಸಿಕ್ಕುವವೋ ಇಲ್ಲವೋ ಎಂಬ ಈ ಸಂಗತಿಗಳು ಈಗೀಗ ಈ ಮನೆಯ ಯಜಮಾನನ ದೃಷ್ಟಿಯಲ್ಲಿ ಗೌಣವಾಗುತ್ತಿವೆ. ಅವನು ಶರ್ಮಿಳೆಯೊಡನೆ "ನೀನು ಸಣ್ಣಪುಟ್ಟ ವಿಷಯಗಳನ್ನು ಕುರಿತು ಅಷ್ಟು ತೊಂದರೆ ಪಡಬೇಡ. ಅಭ್ಯಾಸ ಸ್ವಲ್ಪ ತಲೆ ಕೆಳಗಾದರೆ ಏನೂ ಕೇಡಾಗದು" ಎನ್ನುವನು.

ಶಶಾಂಕನ ಮನಸ್ಸು ಈಗ ಉಬ್ಬರವಿಳಿತಗಳ ಮಧ್ಯಕಾಲದ ನದಿಯಂತೆ ಕೆಲಸದ ವೇಗ ಮಂದವಾಗತೊಡಗಿದೆ. ಅಲ್ಪ ಸ್ವಲ್ಪ ಸಾವಕಾಶವಾದರೆ, ಏನಾದರೂ ಆತಂಕ ಒದಗಿದರೆ ಕೆಲಸದಲ್ಲಿ ಕಷ್ಟವಾಗುವುದು ನಷ್ಟವಾಗುವುದು ಎಂಬ ಮಾತುಗಳು ಈಗ ಅಡಿಗಡಿಗೆ ಕೇಳಿಬರುತ್ತಿಲ್ಲ ಅಂತಹ ಮಾತುಗಳು ಹೊರಬಿದ್ದರೆ ಊರ್ಮಿ ಅವುಗಳ ಗಾಂಭೀರ್ಯವನ್ನು ತನ್ನ ನಗುವ ಹೊಳೆಯಲ್ಲಿ ತೇಲಿಸಿ ಬಿಡುವಳು. ಅವನ ಮುಖದ ಭಾವವನ್ನು ನೋಡಿ 'ಇವತ್ತು ನಿನ್ನ ಗೊಗ್ಗಯ್ಯ ಬಂದಿದ್ದ ಅಂತ ಕಾಣುತ್ತೆ. ಅದೆ ಆ ಹಸರು ರುಮಾಲು ಹಾಕುವ ಯಾವುದೋ ಸೀಮೆಯ ದ ಳ್ಳಿ. ನಿನ್ನನ್ನು ಹೆದರಿಸಿ ಹೋಗಿದೆಯೆಂದು ಕಾಣಿಸುತ್ತೆ' ಎನ್ನುವಳು.

ಶಶಾಂಕನು ವಿಸ್ಮಿತನಾಗಿ "ನೀನು ಅವನನ್ನು ಹೇಗೆ ಬಲ್ಲೆ" ಎನ್ನುವನು. "ನಾನು ಅವನನ್ನು ಚೆನ್ನಾಗಿ ಬಲ್ಲೆ. ಅಂದು ನೀನು ಹೊರಗೆ ಹೋಗಿದ್ದೆ. ಅವನು ಬಂದು ಒಂಟಿಯಾಗಿ ವರಾಂಡದಲ್ಲಿ ಕುಳಿತಿದ್ದ. ನಾನು ಅವನ ಸಂಗಡ ನಾನಾ ಮಾತುಗಳನ್ನು ಆಡುತ್ತ ಕೂರಿಸಿದ್ದೆ. ಅವನ ಊರು ಬಿಕನೀಹತೆ. ಅವನ ಹೆಂಡತಿ ಸೊಳ್ಳೆ ಪರದೆಗೆ ಬೆಂಕಿ ಹತ್ತಿ ನ್ಯೈ ಸುಟ್ಟು ಸತ್ತಳಂತೆ. ಪುನಃ ಮದುವೆ ಮಾಡಿಕೊಳ್ಳುವ ಪ್ರಯತ್ನದಲ್ಲಿರುವನಂತೆ."

"ಅವನಿಂದ ಏನಾದರೂ ಕೆಲಸ ಮಾಡಿಸಬೇಕಾಗಿದ್ದರೆ ನನಗೆ ಹೇಳಿ ಹೋಗು. ಅವನ ಭಾವ ನೋಡಿದರೆ ಅವನ ಕೈಲಿ ಕೆಲಸ ಮಾಡಿಸುವುದು ನನ್ನಿಂದ ಸಾಧ್ಯ ಎಂದು ಕಾಣುತ್ತೆ.

ಈಗೀಗ ಶಶಾಂಕನ ಲಾಭದ ಪಟ್ಟಿಯಲ್ಲಿ ತೊಂಭತ್ತೊಂಭತ್ತರ ಅತ್ತಕಡೆ ದೊಡ್ಡ ಅಂಕಿಗಳು ಬರಬೇಕಾಗಿವೆಯಲ್ಲ ಒಮ್ಮೊಮ್ಮೆ ಅವು ವಿಳಂಬವಾಗಿ ಬಂದರೆ ಅದಕ್ಕಾಗಿ ಅವಸರಪಡಬೇಕೆಂಬ ಚಂಚಲತೆ ಕಾಣಿಸದು. ಸಂಜೆಯ ವೇಳೆ ರೇಡಿಯೋದ ಬಳಿ ಕಿವಿಗೊಟ್ಟು ಕುಳಿತಿರಬೇಕೆನ್ನುವ ಉತ್ಸಾಹ ಇದುವರೆಗೆ ಶಶಾಂಕ ಮಜುಮ್‌ದಾರನ ನಿಯಮದಲ್ಲಿಲ್ಲ. ಈಗ ಊರ್ಮಿ ಅವನನ್ನು ಎಳೆ ತಂದಾಗ ವಿಷಯ ತುಚ್ಛವಾದುದೆಂದಾಗಲೀ ಸಕಾಲ ವ್ಯರ್ಥವಾಗಿ ಕಳೆಯುವುದೆಂದಾಗಲೀ ಅನಿಸುತ್ತಿರಲಿಲ್ಲ. ಆಕಾಶ ವಿಮಾನ ಹಾರಿಸುವುದನ್ನು ನೋಡುವ ಸಲುವಾಗಿ ಒಂದು ದಿನ ಬೆಳಗಿನ ಝಾವದಲ್ಲಿ ಡಮ್ ಡಮ್ ವರೆಗೆ ಹೋಗುವುದಾಗಿತ್ತು. ಅದಕ್ಕೆ ಮುಖ್ಯ ಆಕರ್ಷಣ ವೈಜ್ಞಾನಿಕ ಕುತೂಹಲವಲ್ಲ. ನ್ಯೂ ಮಾರ್ಕೆಟಿನಲ್ಲಿ ವ್ಯಾಪಾರ ಮಾಡ ಹೊರಟಿರುವುದು ಇದೇ ಮೊದಲು. ಇದಕ್ಕೆ ಮುಂಚೆ ಶರ್ಮಿಳೆ ಕಾಯಿಪಲ್ಯೆ ಹಣ್ಣುಹಂಪಲು, ಮತ್ಸ್ಯ ಮಾಂಸಗಳನ್ನು ಕೊಳ್ಳಲು ಅಲ್ಲಿಗೆ ಹೋಗುತ್ತಿದ್ದಳು. ಈ ಕೆಲಸ ವಿಶೇಷವಾಗಿ ಅವಳ ಪಾಲಿನದೆಂದು ಅವಳು ಬಲ್ಲಳು. ಈ ಕೆಲಸದಲ್ಲಿ ಶಶಾಂಕನು ಆಸಕ್ತಿ ತೋರುವನೆಂಬ ಅಂಶ ಅವಳು ಎಂದೂ ಯೋಚಿಸಿರಲಿಲ್ಲ. ಆದರೆ ಊರ್ಮಿ ವ್ಯಾಪಾರಕ್ಕಾಗಿ ಹೋಗುತ್ತಿರಲಿಲ್ಲ. ಕೇವಲ ಸಾಮಾನುಗಳನ್ನು ತರುವುದಕ್ಕಾಗಿ, ಚೌಕಸಿ ಮಾಡಲು, ಹರಟೆ ಹೊಡೆಯಲು ಹೋಗುವಳು. ಶಶಾಂಕನೇನಾದರೂ ಕೊಂಡುಕೊಡಲು ಯತ್ನಿಸಿದರೆ ಅವನ ಹಣದ ಚೀಲವನ್ನು ಕಿತ್ತುಕೊಂಡು ತನ್ನ ಕೈಚೀಲದಲ್ಲಿ ಸೇರಿಸಿಡುವಳು.

ಶಶಾಂಕನ ಕೆಲಸದ ಆವಶ್ಯಕತೆಗಳನ್ನು ಊರ್ಮಿ ಏನೇನೂ ಅರಿಯಳು. ಒಮ್ಮೊಮ್ಮೆ ಅತಿಯಾಗಿ ತೊಂದರೆ ಕೊಡಲು ಶಶಾಂಕನಿಂದ ತೊಂದರೆ ಕೊಡಲು ಶಶಾಂಕನಿಂದ ಬೈಗಳನ್ನೂ ಕೇಳಿರುವಳು. ಅದರ ಫಲ ಎಷ್ಟು ಶೋಕಾವಹವಾಗಿತ್ತೆಂದರೆ ಅದರ ಶೋಚನೀಯತೆಯನ್ನು ನಿವಾರಿಸಲು ಶಶಾಂಕನಿಗೆ ಎರಡರಷ್ಟು ಕಾಲವ್ಯಯವಾಗಿತ್ತು. ಒಂದು ಕಡೆ ಊರ್ಮಿಯ ಕಣ್ಣಿನಲ್ಲಿ ಬಾಷ್ಪ ಸಂಚಾರ ಇನ್ನೊಂದು ಕಡೆ ಅನಿವಾರ್ಯ ಕೆಲಸದ ಕರೆ. ಆದರೆ ಅಪರಾಹ್ಣ ಕಳೆದರಾಯಿತು. ಅಲ್ಲಿರುವುದು ಅಸಾಧ್ಯವಾಗಿತ್ತು. ಯಾವುದಾರೂ ಕಾರಣದಿಂದ ಎಂದಾದರೊಂದು ದಿನ ಹೊತ್ತು ಮೀರಿ ಬಂದರೆ ಊರ್ಮಿಯ ದುರ್ಭೇದ್ಯ ಮೌನದ ಅಂತರ್ಯದಲ್ಲಿ ಅಡಗಿ ಸಹಿಸಲಸಾಧ್ಯ ವಾಗುತ್ತಿತ್ತು. ಈ ತಡೆದ ಕಣ್ಣೀರಿನ ಮಂಜುಕವಿದ ಬಿಗುಮಾನ ಶಶಾಂಕ ನಿಗೆ ಒಳಗೊಳಗೆ ಆನಂದವುಂಟು ಮಾಡುತ್ತಿತ್ತು. ಗೃಹಸ್ಥನಂತೆ "ಊರ್ಮಿ, ಮಾತನಾಡುವುದಿಲ್ಲ ಎಂಬ ಸತ್ಯಾಗ್ರಹವನ್ನು ಪಾಲಿಸಬೇಕಾದುದು ಆವಶ್ಯ ಕವೇ-- ಆದರೆ ಆಟ ಆಡುವುದಿಲ್ಲವೆಂದು ಪಣವೇನೂ ಇರಲಿಲ್ಲವಲ್ಲ" ಎನ್ನು ವನು. ಅನಂತರ ಟೆನ್ನಿಸ್ ಬ್ಯಾಟ್ ಕೈಯಲ್ಲಿ ಹಿಡಿದುಕೊಂಡು ಹೊರಬೀಳು ವನು ಆಟದಲ್ಲಿ ಶಶಾಂಕ ಗೆಲವಿನಸಮೀಪಕ್ಕೆಬಂದು ನುನಃಪೂರ್ವಕ್ಕಾಗಿಯೇ ಸೋಲುವನು. ವ್ಯರ್ಥವಾಗಿ ಕಳೆದ ಕಾಲದ ವಿಷಯವಾಗಿ ಮರುದಿನ ಬೆಳಿಗ್ಗೆ ಎದ್ದೊಡನೆ ಪಶ್ಚಾತ್ತಾಪ ಪಡುತ್ತಿರುವನು.

ಯಾವುದೋ ಒಂದು ರಜದ ದಿನ ಶಶಾಂಕ ಬಲಗೈಯಲ್ಲಿ ಕೆಂಪು ನೀಲಿ ಪೆನ್‌ಸಿಲ್ ಹಿಡಿದುಕೊಂಡು ಎಡಗೈಯ ಬೆರಳುಗಳಿಂದ ನಿಷ್ಕಾರಣವಾಗಿ ತಲೆಯ ಕೂದಲನ್ನು ಕೆದರುತ್ತ ಆಫೀಸ್ ರೂಮಿನಲ್ಲಿ ಯಾವುದೋ ಒಂದು ಕಠಿಣ ಕೆಲಸದ ವಿಷಯವಾಗಿ ಆಲೋಚಿಸುತ್ತಿರುವಾಗ ಊರ್ಮಿ ಬಂದು– 'ನಿನ್ನ ದಳ್ಳಾಳಿಯವನೊಡನೆ ಏರ್ಪಾಡು ಮಾಡಿದ್ದೇನೆ. ಇವತ್ತು ನನಗೆ ಪಾರ್ಶ್ವನಾಥರ ದೇವಾಲಯ ತೋರಿಸಲು ನಡೆ ಮತ್ತೆ' ಎನ್ನುವಳು.

'ಇವತ್ತು ಬೇಡ, ಇವತ್ತು ನನಗೆ ಏಳಲು ಅವಕಾಶವಿಲ್ಲ' ಎಂದು ಶಶಾಂಕನು ಬೇಡಿಕೊಳ್ಳುವನು.

ಕೆಲಸದ ಜವಾಬ್ದಾರಿಯನ್ನು ಊರ್ಮಿ ಏನೇನೂ ಲಕ್ಷಿಸಳು. "ಅಬಲೆ ರಮಣಿಯನ್ನು ಅರಕ್ಷಿತ ಅವಸ್ಥೆಯಲ್ಲಿ ಹಸರು ರುಮಾಲಿನವನ ಕೈಯಲ್ಲಿ ಸಮರ್ಪಿಸಲು ಸಂಕೋಚವಾಗದು ಅಲ್ಲವೆ. ಇದೇಯೇನೋ ನಿನ್ನ ಷಿವಲ್‌ರಿ" ಎನ್ನುವಳು.

ಕೊನೆಗೆ ಅವಳ ಬಲತ್ಕಾರದಿಂದ ಶಶಾಂಕನು ಕೆಲಸಬಿಟ್ಟು ಮೋಟಾರ್ ನಡೆಸುತ್ತ ಹೊರಡುವನು. ಈ ತರಹದ ತುಂಟಾಟ ನಡೆಯುವ ಸುದ್ದಿ ತಿಳಿದರೆ ಶರ್ಮಿಳೆ ಬಹು ಬೇಸರಗೊಳ್ಳುವಳು. ಗಂಡಸರ ಸಾಧನೆಯ ಕ್ಷೇತ್ರದಲ್ಲಿ ಸ್ತ್ರೀಯರ ಅನಧಿಕಾರ ಪ್ರವೇಶ ಯಾವ ವಿಧದಲ್ಲೂ ಸಹಿಸತಕ್ಕದ್ದಲ್ಲ ಎಂದು ಅವಳ ಅಭಿಪ್ರಾಯ. ಊರ್ಮಿಯು ಎಳೆಯ ಹುಡುಗಿಯೆಂದು ಶರ್ಮಿಳೆಯ ಭಾವನೆ. ಇಂದಿಗೂ ಆ ಭಾವನೆ ಶಾಶ್ವತವಾಗಿತ್ತು. ಅದಿರಲಿ, ಹಾಗೆಂದು ಹೇಳಿ ಆಫೀಸು ರೂಮನ್ನು ಆಟದ ಬೈಲು ಮಾಡುವುದೇ? ಊರ್ಮಿಯನ್ನು ಕರೆದು ಯಥೇಷ್ಟವಾಗಿ ಗದರಿಸುವಳು. ಆ ಗದರಿಕೆಯ ಸರಿಯಾದ ಫಲ ಆಗಲು ಅವಕಾಶವಿತ್ತು. ಆದರೆ ಹೆಂಡತಿಯ ಕೋಪದ ಧ್ವನಿ ಕೇಳಿ ಶಶಾಂಕ ಸ್ವತಃ ಹೊರಗೆ ಬಂದು ನಿಂತು ಊರ್ಮಿಯನ್ನು ಸಮಾಧಾನಗೊಳಿಸಲು ಕಣ್ಣುಮಿಟಕಿಸುತ್ತಿದ್ದನು. ಇಸ್ಪೀಟು ಕಟ್ಟನ್ನು ತೋರುತ್ತ 'ಹೊರಟು ಬಾ' ಆಫೀಸು ರೂಮಿನಲ್ಲಿ ಕುಳಿತು ನಿನಗೆ † 'ಪೋಕರ್' ಆಡಲು ಕಲಿಸುವೆ ಎಂದು ಸನ್ನೆ ಮಾಡುವನು. ಈಗ ಆಡಲು ಏನೇನೂ ಅವಕಾಶವಿಲ್ಲ. ಊರ್ಮಿಯ ಮನಸ್ಸು ನೊಂದಿದೆಯೆಂದು ಆ ನೋವು ಊರ್ಮಿಗಿಂತ ಹೆಚ್ಚಾಗಿ ಅವನಿಗೆ ಸಂಕಟವುಂಟು ಮಾಡುತ್ತಿತ್ತು. ಅವನು ಸ್ವತಃ ಅವಳನ್ನೇ ಅನುನಯದಿಂದ ಅಷ್ಟೇ ಏಕೆ ಗದರಿಕೆಯಿಂದ ಕೆಲಸದ ಸ್ಥಳದಿಂದ ದೂರ ಇಡಬಲ್ಲನು. ಆದರೆ ಈ ವಿಷಯವಾಗಿ ಶರ್ಮಿಳೆ ಊರ್ಮಿಯ ಮೇಲೆ ಅಧಿಕಾರ ಮಾಡುವುದು ಅವನಿಗೆ ಸಹಿಸಲಸಾಧ್ಯವಾಗಿತ್ತು.

ಶರ್ಮಿಳೆಯು ಶಶಾಂಕನನ್ನು ಕರೆಸಿ "ನೀವು ಅವಳ ತುಂಟಾಟಕ್ಕೆಲ್ಲಾ ಬೆಂಬಲ ಕೊಟ್ಟರೆ ಸಾಧ್ಯವೇ. ವೇಳೆ ಅವೇಳೆಯ ಅರಿವಿಲ್ಲ. ನಿಮ್ಮ ಕೆಲಸ ಹಾಳಾಗುವುದಲ್ಲ" ಎನ್ನುವಳು.

ಶಶಾಂಕನು 'ಸರಿ. ಪಾಪ ಎಳೆಯ ಹುಡುಗಿ ಇಲ್ಲಿ ಅವಳ ಸಂಗಡಿಗರು ಯಾರೂ ಇಲ್ಲ. ಅಷ್ಟಿಷ್ಟು ಆಟಪಾಟ ಇಲ್ಲದಿದ್ದರೆ ಬದುಕುವುದಾದರೂ ಹೇಗೆ' ಎನ್ನುವನು.

ಈ ರೀತಿಯಲ್ಲಿ ನಾನಾ ಪ್ರಕಾರದ ಹುಡುಗಾಟಿಕೆ. ಶಶಾಂಕನು ಮನೆ ಕಟ್ಟುವ ಪ್ಲ್ಯಾನನ್ನು ತೆಗೆದುಕೊಂಡು ಕುಳಿತರೆ ಅವನ ಹತ್ತಿರಕ್ಕೆ ಕುರ್ಚಿ ಎಳೆದುಕೊಂಡು ಕುಳಿತು 'ವಿವರಿಸಿ ಹೇಳು' ಎನ್ನುವಳು. ಸುಲಭವಾಗಿ ತಿಳಿದುಕೊಳ್ಳುವಳು. ಗಣಿತದ ನಿಯಮಗಳು ಕಠಿಣವಾಗಿ ತೋರವು. ಶಶಾಂಕನು

† ಪೋಕರ್ ಒಂದು ಬಂಗೆಯ ಇಸ್ಪೀಟ್ ಆಟ.

ಬಹು ಸಂತೋಷಪಟ್ಟು ಅವಳಿಗೆ ಪ್ರಮೇಯಗಳನ್ನು (Problems) ಕೊಡುವನು. ಅವಳು ಮಾಡಿ ತರುವಳು. ಸೆಣಬಿನ ಕಾರ್ಖಾನೆಯವರ ಉಗಿಯ ದೋಣಿಯಲ್ಲಿ ಕೆಲಸದ ಮೇಲ್ವಿಚಾರಣೆಗಾಗಿ ಅವನು ಹೊರಟರೆ ನಾನೂ ಬರುವೆನೆಂದು ಅವಳು ಹತ್ತುವಳು. ಹೋಗಿ ಸುಮ್ಮನಿರುವಳೇ! ಅಳತೆಯ ಲೆಖ್ಖದ ವಿಷಯವಾಗಿ ತರ್ಕ ಹೂಡುವಳು. ಶಶಾಂಕನು ಪುಳಕಿತನಾಗುವನು. ಶ್ರೇಷ್ಠ ಕವನಕ್ಕಿಂತಲೂ ಇದರಲ್ಲಿ ರಸಾಧಿಕ್ಯ. ಅದರಿಂದ ಈಗ ಚೇಂಬರಿನ ಕೆಲಸ ಮನೆಗೆ ತಂದಾಗ ಅವನ ಮನಸ್ಸಿನಲ್ಲಿ ಬೇಸರವಿರದು. ಗೆರೆ ಎಳೆದು ಅಂಕಿ ಬರೆಯುವ ಕೆಲಸದಲ್ಲಿ ಅವನಿಗೆ ಜೊತೆಯೊಂದು ಸಿಕ್ಕಿದೆ. ಊರ್ಮಿಯನ್ನು ಹತ್ತಿರ ಕೂರಿಸಿಕೊಂಡು ವಿವರಿಸಿ ತಿಳಿಸುತ್ತ ತಿಳಿಸುತ್ತ ಕೆಲಸ ಮುಂದುವರಿಯಿತು. ವೇಗವಾಗಿ ಮುಂದರಿಯುವದೆನ್ನಲು ಸಾಧ್ಯವಿಲ್ಲ. ಆದರೆ ನಿಧಾನವಾಗಿ ಯಾರೂ ವ್ಯರ್ಥ ಕಾಲಹರಣವಾಗಲಿಲ್ಲವೆಂದು ಮನಸ್ಸಿಗೆ ಸಮಾಧಾನ.

ಇವುಗಳೆ ಶರ್ಮಿಳೆಗೆ ಪದ್ಧತಿಯಂತೆ ವ್ಯಥೆ ಉಂಟು ಮಾಡುವವು. ಊರ್ಮಿಳೆಯ ಹುಡುಗಾಟಿಕೆಯನ್ನೂ ಅವಳು ಬಲ್ಲಳು. ಗೃಹಿಣೀತ್ವದಲ್ಲಿ ಅವಳ ಅನಭಿಜ್ಞತೆಯನ್ನೂ ಪ್ರೀತಿಯಿಂದ ಸಹಿಸಿಕೊಳ್ಳುವಳು. ಆದರೆ ಉದ್ಯೋಗದ ಕ್ಷೇತ್ರದಲ್ಲಿ ಗಂಡನೊಡನೆ ಸ್ತ್ರೀಬುದ್ಧಿಯ ದೂರತ್ವವು ಅತ್ಯಾವಶ್ಯಕವು. ತಾನು ತೀರ್ಮಾನಿಸಿಕೊಂಡಿದ್ದಳಲ್ಲ ಅಲ್ಲಿ ಊರ್ಮಿಯ ಆತಂಕವಿಲ್ಲದ ಓಡಿಯಾಟವು ಅವಳಿಗೆ ಚೆನ್ನವೆನಿಸುತ್ತಿರಲಿಲ್ಲ. ಅದು ಸಂಪೂರ್ಣವಾಗಿ ಅಧಿಕ ಪ್ರಸಂಗ. ತಮ್ಮ ತಮ್ಮ ಎಲ್ಲೆಯನ್ನು ಅಂಗೀಕರಿಸಿ ನಡೆಯುವಕ್ಕೇ ಸ್ವಧರ್ಮವೆಂದು ಗೀತೆ ಬೋಧಿಸುತ್ತದೆ.

ಒಳಗೊಳಗೆ ಅತ್ಯಂತ ಅಧೀರಳಾಗಿ ಅವಳನ್ನು ಕೇಳುವಳು– "ಸರಿ, ಊರ್ಮಿ; ಆ ಸೊಟ್ಟಾಪಟ್ಟ ಗೀರು ಎಳೆಯುವುದು, ಅಂಕಿಗಳನ್ನು ಬರೆಯುವುದು ಇವೆಲ್ಲ ನಿಜವಾಗಿಯೂ ನಿನಗೆ ಇಷ್ಟವಾದುವೇನು?"

"ನನಗೆ ಬಹು ಇಷ್ಟ, ಅಕ್ಕ."

ಶರ್ಮಿಳೆ ಅಪನಂಬಿಕೆಯ ಧ್ವನಿಯಲ್ಲೇ ಹೇಳುವಳು– "ಹೂ–ಬಹು ಇಷ್ಟ. ಅವರನ್ನು ಸಂತೋಷಪಡಿಸಬೇಕೆಂದೇ ಇಷ್ಟವಾಗಿರುವಂತೆ ತೋರ್ಪಡಿಸಿಕೊಳ್ಳುವೆ."

ಹಾಗೆಯೇ ಇದ್ದರೂ ಇರಲಿ. ಉಡಿಗೆತೊಡಿಗೆ, ಊಟ ಉಪಚಾರ, ಸೇವಾ ಶುಶ್ರೂಶೆಗಳ ಮೂಲಕ ಶಶಾಂಕನನ್ನು ಸಂತೋಷಪಡಿಸುವುದು

ಶರ್ಮಿಳೆಯ ಸ್ವಭಾವ ಸಹಜಗುಣ ಆದರೆ ಈ ಬಗೆಯ ತೃಪ್ತಿಯನ್ನುಂಟು ಮಾಡುವುದು ಅವಳ ಸ್ವಭಾವದೊಡನೆ ಸರಿತೂಗದು.

ಶಶಾಂಕನನ್ನು ಬಾರಿ ಬಾರಿಗೆ ಕರೆದು ಹೇಳುವಳು: "ಅವಳನ್ನು ಸೇರಿಸಿಕೊಂಡು ವ್ಯರ್ಥವಾಗಿ ಕಾಲ ಕಳೆಯುವುವಿರೇಕೆ? ಅದರಿಂದ ನಿಮ್ಮ ಉದ್ಯೋಗದಲ್ಲಿ ನಷ್ಟವಾಗುವುದಿಲ್ಲವೆ? ಅವಳು ಶುದ್ಧ ಅರಿಯದ ಹುಡುಗಿ. ಇದೆಲ್ಲವನ್ನೂ ಅವಳು ಬಲ್ಲಳೇ?"

ಶಶಾಂಕನು: "ನನಗಿಂತ ಕಡಿಮೆ ತಿಳಿದಿಲ್ಲ" ಎನ್ನುವನು.

ಈ ಹೊಗಳಿಕೆಯಿಂದ ಅಕ್ಕನಿಗೆ ಆನಂದವಾದೀತೆಂದು ಊರ್ಮಿಳೆಯ ಎಣಿಕೆ. ಅರಿಯದವಳು.

ಸ್ವಂತ ಕೆಲಸದ ಹಿರಿಮೆಯಲ್ಲಿ ಶಶಾಂಕ ತನ್ನ ಹೆಂಡತಿಯ ವಿಷಯದಲ್ಲಿ ಆಸಕ್ತಿಯಿಲ್ಲದೆ ಇದ್ದನಲ್ಲ ಆಗ ಶರ್ಮಿಳೆ ಅದು ಕೇವಲ ಅಗತ್ಯವೆಂದು ಎಣಿಸಿರಲಿಲ್ಲ. ಅದರಿಂದ ಅವಳಿಗೆ ಹೆಮ್ಮೆಯುಂಟಾಗುತ್ತಿತ್ತು. ಆದ್ದರಿಂದಲೇ ಈಗ ತನ್ನ ಸೇವಾಪರಾಯಣ ಹೃದಯದ ಕೋರಿಕೆಯನ್ನು ಬಹುಮಟ್ಟಿಗೆ ಕಡಿಮೆ ಮಾಡಿದ್ದಳು. ಅವಳ ಅಭಿಪ್ರಾಯವೇನಂದರೆ "ಪುರುಷರು ರಾಜರಂತೆ ಅಸಾಧ್ಯ ಕೆಲಸದ ಹೊಣೆಗಾರಿಕೆಯನ್ನು ತಮ್ಮ ಮನಸ್ಸಿನಂತೆಯೇ ನಡೆಸಲು ಅವಕಾಶವಿರಬೇಕು. ಇಲ್ಲವಾದರೆ ಅವರು ಹೆಣ್ಣುಮಕ್ಕಳಿಗಿಂತ ಕೀಳಾಗುವರು. ಯಾಕಂದರೆ ಸ್ತ್ರೀಯರು ತಮ್ಮ ಸ್ವಾಭಾವಿಕ ಮಾಧುರ್ಯದಿಂದ ಪ್ರೇಮದ ಐಶ್ವರ್ಯವನ್ನೇ ನಿತ್ಯ ತಮ್ಮ ಸ್ಥಾನವನ್ನು ಸಹಜವಾಗಿ ಸಾರ್ಥಕಗೊಳಿಸುವರು. ಆದರೆ ಗಂಡಸರು ಪ್ರತಿನಿತ್ಯ ಯುದ್ಧದ ಮೂಲಕ ತಮ್ಮ ಸಾರ್ಥಕ್ಯವನ್ನು ಸ್ಥಿರಪಡಿಸಬೇಕು. ಹಿಂದಿನ ಕಾಲದಲ್ಲಿ ರಾಜರುಗಳು ಪ್ರಯೋಜನವಿಲ್ಲದಿದ್ದರೂ ರಾಜ್ಯವಿಸ್ತಾರಕ್ಕಾಗಿ ಹೊರಬೀಳುತ್ತಿದ್ದರು. ರಾಜ್ಯಲಾಭಕ್ಕಾಗಲ್ಲ. ಹೊಸದಾಗಿ ಪೌರುಷದ ಗೌರವವನ್ನು ಪ್ರಮಾಣಪಡಿಸುವದಕ್ಕಾಗಿ. ಈ ಗೌರವ ಗಳಿಸುವುದಕ್ಕೆ ಸ್ತ್ರೀಯರು ಅಡ್ಡಿಯಾಗಬಾರದು." ಶರ್ಮಿಳೆ ಅಡ್ಡಿಮಾಡುತ್ತಿರಲಿಲ್ಲ. ಮನಃಪೂರ್ವಕವಾಗಿಯೇ ಶಶಾಂಕನಿಗೆ ಅವನ ಗುರಿ ಸಾಧಿಸಲು ಪೂರ್ಣವಾಗಿ ದಾರಿ ಬಿಟ್ಟಿದ್ದಳು. ಒಂದಾನೊಂದು ಕಾಲದಲ್ಲಿ ಅವನನ್ನು ತನ್ನ ಸೇವಾಜಾಲದಲ್ಲಿ ಹಿಡಿದಿಟ್ಟಿದ್ದಳು. ಮನಸ್ಸಿಗೆ ವ್ಯಥೆಯಾದರೂ ಆ ಬಲೆಯನ್ನು ಕ್ರಮೇಣ ಬಿಡಿಸುತ್ತ ಬಂದಿರುವಳು. ಈಗಲೂ ಕಣ್ಮರೆಯಾದ ವೇಷಭೂಷ್ಯದಿಂದ ಯಥೇಷ್ಟ ಸೇವೆ ಮಾಡುವಳು.

ಶಶಾಂಕನ ಆಹಾರ-ವಿಹಾರ ವೇಷಭೂಷಣಗಳಲ್ಲಿ ನಡೆದು ಬಂದಿದ್ದ ಪದ್ಧತಿಯಲ್ಲಿ ನಾನಾ ವಿಧವಾದ ತಪ್ಪುಗಳುಂಟಾಗುತ್ತಿವೆಯೆನ್ನಲು ಸಂದೇಹವೇ ಇಲ್ಲ. ಅವನಿಗೆ ರುಚಿಕರವೂ ಆರೋಗ್ಯವೂ ಆದ ತಿನಿಸು ಅಕಸ್ಮಾತ್ತಾಗಿ ಊಟದ ವೇಳೆಯಲ್ಲಿ ಕಾಣಿಸದು. ಅದಕ್ಕೆ ಕಾರಣ ತಿಳಿಯುವುದು. ಆದರೆ ಈ ಕುಟುಂಬದಲ್ಲಿ ಇದುವರೆಗೆ ಯಾವ ನೆಪವೂ ಉಪಯೋಗವಾಗುತ್ತಿರಲಿಲ್ಲ. ಈ ತರಹದ ಎಚ್ಚರದಪ್ಪುವಿಕೆಯೆಲ್ಲ ಕ್ಷಮಿಸಲಾರದುವಾಗಿದ್ದುವು. ಕಠೋರ ಶಿಕ್ಷೆಗೆ ತಕ್ಕುವಾಗಿದ್ದವು. ಅಂತಹ ನಿಯಮಬದ್ಧವಾದ ಸಂಸಾರದಲ್ಲಿ ಈಗ ಇಷ್ಟು ಭಾರೀ ಬದಲಾವಣೆ ಆಗಿದೆ. ಎಂತಹ ಮಹತ್ತಾದ ತಪ್ಪೂ ಕೂಡ ಪ್ರಹಸನದಂತೆ ಎಣಿಕೆಯಾಗುತ್ತಿದೆ. ಯಾರ ಮೇಲೆ ತಪ್ಪು ಹೊರಿಸುವುದು? ಅಕ್ಕನ ಹೇಳಿಕೆಯಂತೆ ಊರ್ಮಿ ಅಡಿಗೆಯ ಮನೆಯಲ್ಲಿ ಬೆತ್ತದ ಕುರ್ಚಿ ಹಾಕಿಕೊಂಡು ಕುಳಿತು ಕೆಲಸ ಮಾಡಿಸುವುದರಲ್ಲಿ ನಿಯುಕ್ತಳಾಗುವಳು. ಅದರ ಸಂಗಡಲೇ ಅಡಿಗೆಯವಳ ಪೂರ್ವಜೀವನದ ವಿವರಣೆಯ ಪರ್ಯಾಲೋಚನೆಯೂ ನಡೆಯುತ್ತಿರುವದು. ಇಂತಹ ಸಮಯದಲ್ಲಿ ಶಶಾಂಕನು ಹಠಾತ್ತಾಗಿ ಅಲ್ಲಿಗೆ ಬಂದು 'ಇದೆಲ್ಲ ಹಾಗಿರಲಿ ಏಳು' ಎನ್ನುವನು.

"ಯಾಕೆ ? ಏನು ಮಾಡಬೇಕು?"

"ಈ ಹೊತ್ತು ನನಗೆ ರಜವಿದೆ. ನಡೆ, ವಿಕ್ಟೋರಿಯಾ ಮೆಮೋರಿಯಲ್ ಕಟ್ಟಡವನ್ನು ನೋಡಿಕೊಂಡು ಬರೋಣ. ಅದರ ದೊಡ್ಡಸ್ತಿಕೆ ಕಂಡು ಏಕೆ ನಗು ಬರುವುದೆಂಬದನ್ನು ನಿನಗೆ ತಿಳಿಸುವೆ "

ಇಷ್ಟು ದೊಡ್ಡ ಪ್ರಯೋಜನದಿಂದ ಕೆಲಸ ಖೋತಾ ಮಾಡಲು ಊರ್ಮಿಯ ಮನಸ್ಸು ತಕ್ಷಣ ಚಂಚಲವಾಗುವುದು. ಅಡಿಗೆಯ ಮನೆಯಿಂದ ತನ್ನ ಸಹೋದರಿ ಅಂತರ್ಧಾನಳಾದರೆ ಅಡುವುದರಲ್ಲಿ ಏನೂ ವ್ಯತ್ಯಾಸವಾಗದೆಂಬುದನ್ನು ಶರ್ಮಿಳೆ ಬಲ್ಲಳು. ಆದರೂ ಸ್ನಿಗ್ಧ ಹೃದಯದ ಎಚ್ಚರಿಕೆಯಿಂದ ಶಶಾಂಕನ ಸೌಖ್ಯವನ್ನು ಹೆಚ್ಚಿಸಲೆಳಸುವಳು. ಆದರೆ ಸೌಖ್ಯದ ಮಾತನ್ನೆತ್ತಿ ಆಗುವುದಾದರೂ ಏನು? ದಿನಂಪ್ರತಿ ಸೌಕರ್ಯಗಳು ಸಾಮಾನ್ಯವಾಗುತ್ತಿರುವುದೂ, ಗಂಡನು ಸಂತೋಷಗೊಳ್ಳುತ್ತಿರುವದೂ ಕಾಣುತ್ತಲೇ ಇದೆ.

ಈ ಕಾರಣಗಳಿಂದ ಶರ್ಮಿಳೆಯು ಮನಸ್ಸಿನಲ್ಲಿ ಅಶಾಂತಿ ನೆಲೆಸಿತು. ರುಗ್ಣಶಯ್ಯೆಯಲ್ಲಿ ಅತ್ತ ಇತ್ತ ಹೊರಳುತ್ತ ಅಡಿಗಡಿಗೆ ತನಗೆ ತಾನೇ ಅಂದುಕೊಳ್ಳುವಳು, "ಸಾಯುವ ಮುಂಚೆ ಅಧಿಕ. ಇನ್ನೇನಿಲ್ಲ ಸಾಧ್ಯ

ವಾಯಿತು. ಅವರನ್ನು ಆನಂದಗೊಳಿಸಲಾರದೆ ಹೋದೆ. ಊರ್ಮಿಮಾಲೆಯಲ್ಲಿ ನನ್ನನ್ನು ಕಾಣುವೆನೆಂದು ಎಣಿಸಿದ್ದೆ; ಆದರೆ ಅವಳು ನಾನಲ್ಲ; ಸಂಪೂರ್ಣವಾಗಿ ಬೇರೊಂದು ಹೆಣ್ಣು.'' ಕಿಟಕಿಯ ಹೊರಗಡೆ ನೋಡ ನೋಡುತ್ತ ಆಲೋಚಿಸುವಳು: "ನನ್ನ ಜಾಗವನ್ನು ಅವಳು ತೆಗೆದುಕೊಳ್ಳಲಿಲ್ಲ. ನಾನು ಕಣ್ಮರೆಯಾದರೆ ನಷ್ಟವಾಗುವದು. ಆದರೆ ಅವಳು ಹೋಗಿ ಬಿಟ್ಟರೆ ಎಲ್ಲವೂ ಶೂನ್ಯವಾಗುವುದು."

ಯೋಚಿಸುತ್ತ ಯೋಚಿಸುತ್ತ ಅಕಸ್ಮಾತ್ತಾಗಿ ನೆನಪಾಗುವುದು. ಚಳಿಗಾಲ ಬರುತ್ತಿದೆ. ಬಟ್ಟೆಗಳನ್ನು ತೆಗೆದು ಬಿಸಿಲಿಗೆ ಹಾಕಬೇಕು. ಊರ್ಮಿ ಆಗ ಶಶಾಂಕನೊಡನೆ ಪಿಂಗ್ ಪಾಂಗ್ ಆಡುತ್ತಿದ್ದಳು. ಕರೆಯಕಳುಹಿದಳು.

''ಊರ್ಮಿ, ಇದೋ ಬೀಗದ ಕೈ ತೆಗೆದುಕೊ. ಉಣ್ಣೆಯ ಬಟ್ಟೆಗಳನ್ನೆಲ್ಲಾ ತಾರಸಿಯ ಮೇಲೆ ಬಿಸಿಲಲ್ಲಿ ಹರಡಮ್ಮ" ಎನ್ನುವಳು.

ಊರ್ಮಿ ಅಲಮಾರಿಯಲ್ಲಿ ಬೀಗದ ಕೈಯ್ಯನ್ನು ತಿರುಗಿಸಿರುವಳು. ಆ ವೇಳೆಗೆ ಶಶಾಂಕನು ಬಂದು "ಅದೆಲ್ಲಾ ಆಮೇಲೆ ಆಗಲಿ, ಬೇಕಾದಷ್ಟು ಹೊತ್ತಿದೆ. ಮೊದಲು ಆಟ ಮುಗಿಸಿ ಹೋಗು" ಎನ್ನುವನು.

"ಆದರೆ ಅಕ್ಕ---"

"ಒಳ್ಳೇದು. ಅಕ್ಕನ ಹತ್ತಿರ ರಜ ಕೇಳಿ ಬರುವೆ-"

ಅಕ್ಕ ರಜ ಕೊಟ್ಟಳು. ಸಂಗಡಲೇ ದೊಡ್ಡದೊಂದು ನಿಟ್ಟುಸಿರು ಬಿಟ್ಟಳು. ದಾಸಿಯನ್ನು ಕರೆದು "ನನ್ನ ಹಣೆಯ ಮೇಲೆ ತಣ್ಣೀರಿನ ಪಟ್ಟಿ ಇಡು" ಎಂದಳು.

ಬಹು ದಿನಗಳ ನಂತರ ಬಿಡುಗಡೆ ಹೊಂದಿ ಊರ್ಮಿ ಆತ್ಮವಿಸ್ಮೃತಳಾಗಿದ್ದರೂ ಒಮ್ಮೊಮ್ಮೆ ಅಕಸ್ಮಾತ್ತಾಗಿ ತನ್ನ ಜೀವಮಾನದ ಕಠೋರ ಹೊಣೆಗಾರಿಕೆ ನೆನಪಾಗುವುದು. ಅವಳು ಸ್ವಾಧೀನಳಲ್ಲ. ಅವಳು ತನ್ನ ವ್ರತದ ಸಂಗಡಲೇ ಬಂಧಿತಳು. ಆದರ ಸಂಗಡಲೆ ಕಲೆತು ವ್ಯಕ್ತಿಯೊಬ್ಬನೊಡನೆ ಅವಳನ್ನು ಬಿಗಿದು ಕಟ್ಟಿದೆಯಲ್ಲ ಆತನ ಆಜ್ಞೆ ಅವಳ ಮೇಲಿದೆ. ತನ್ನ ಬಾಳುವೆಯ ಮೇಲೆ ಅವನ ಶಾಶ್ವತ ಅಧಿಕಾರ ಇದೆಯೆಂಬುದನ್ನು ಅವಳು ಯಾವ ವಿಧದಲ್ಲೂ ಮರೆಯಲಾರಳು. ನೀರದನು ಇದ್ದಾಗ ಒಪ್ಪಿಕೊಳ್ಳುವುದು ಸುಲಭವಾಗಿತ್ತು. ತನ್ನ ಮನಸ್ಸಿನಲ್ಲಿ ಶಕ್ತಿಯಿತ್ತು. ಈಗ ಅವಳ ಇಚ್ಛಾಶಕ್ತಿ ಸಂಪೂರ್ಣ

ವಾಗಿ ದಾರಿ ತಪ್ಪಿದೆ, ಆದರೂ ಕರ್ತವ್ಯಬುದ್ಧಿ ಎಚ್ಚರ ಕೊಡುತ್ತಿದೆ. ಕರ್ತವ್ಯ ಬುದ್ಧಿಯ ಬಲಾತ್ಕಾರದಿಂದ ಮನಸ್ಸು ಇನ್ನೂ ಕೆಟ್ಟು ಹೋಗುತ್ತಿದೆ. ತನ್ನ ತಪ್ಪನ್ನು ಕ್ಷಮಿಸುವುದು ಕಠಿಣವೆಂದೇ ತಪ್ಪು ಹೆಚ್ಚು ಆಶ್ರಯ ಹೊಂದ ತೊಡಗಿತು. ವೇದನೆಗೆ ಆಫೀಮಿನ ಲೇಪ ಹಚ್ಚುವುದಕ್ಕಾಗಿ ಶಶಾಂಕನ ಸಂಗಡ ಆಟಪಾಟಗಳಲ್ಲಿ ಸದಾಕಾಲ ತನ್ನನ್ನು ಮರೆಯಲು ಯತ್ನಿಸುವಳು. ವೇಳೆ ಬಂದಾಗ ಎಲ್ಲಾ ತಾನಾಗಿ ಸರಿಹೋಗುವುದು. ಈಗ ಇರುವ ಈ ಕೆಲದಿನಗಳ ವಿರಾಮದಲ್ಲಿ ಆ ಮಾತೆಲ್ಲ ಒತ್ತಟ್ಟಿಗಿರಲಿ ಎನ್ನುವಳು. ಮತ್ತೆ ಅಕಸ್ಮಾತ್ತಾಗಿ ಒಂದೊಂದು ದಿನ ತಲೆ ಕೆಟ್ಟು ಟ್ರಂಕಿನಿಂದ ಪುಸ್ತಕಗಳನ್ನು ಹೊರಗೆ ತೆಗೆದು ಅವುಗಳ ಮೇಲೆ ತಲೆ ಬಗ್ಗಿಸಿ ಕೂರುವಳು. ಇನ್ನು ಶಶಾಂಕನ ಸರದಿ. ಪುಸ್ತಕ ಗಳನ್ನು ಎಳೆದುಕೊಂಡು ಪುನಃ ಪೆಟ್ಟಿಗೆಯಲ್ಲಿ ಇಟ್ಟು ಆ ಪೆಟ್ಟಿಗೆಯ ಮೇಲೆ ಅವನು ಕೂರುವನು. ಊರ್ಮಿಯು 'ಭಾವ,' ಮಹಾ ಅನ್ಯಾಯ. ನನ್ನ ಕಾಲವನ್ನು ನಷ್ಟ ಮಾಡಬೇಡ' ಎನ್ನುವಳು.

ಶಶಾಂಕನು "ನಿನ್ನ ಕಾಲವನ್ನು ನಷ್ಟ ಮಾಡಲು ಹೊರಟು ನನ್ನ ಕಾಲವೂ ನಷ್ಟವಾಗುವುದು. ಆದ್ದರಿಂದ ಮುಯ್ಯಿಗೆ ಮುಯ್ಯಿ ಲೆಕ್ಕ ಸರಿ ಹೋಯಿತು" ಎನ್ನುವನು.

ಅನಂತರ ಸ್ವಲ್ಪ ಹೊತ್ತು ಎಳೆದಾಟ ಕಿತ್ತಾಟದ ಯತ್ನ ನಡೆಸಿ ಕೊನೆಗೆ ಊರ್ಮಿ ಸೋಲನ್ನೊಪ್ಪುವಳು. ಅದು ತನ್ನ ವಿಷಯದಲ್ಲಿ ಸಂಪೂರ್ಣವಾಗಿ ಹಾನಿಕರವೆಂಬುದು ಅರಿವಾಗದು. ಈ ರೀತಿ ಅಡ್ಡಿಗಳುಂಟಾದರೂ ಕರ್ತವ್ಯ ಬುದ್ಧಿಯ ಬಲಾತ್ಕಾರ ನಾಲ್ಕಾರು ದಿನಗಳು ನಡೆಯುವದು. ಆ ಮೇಲೆ ಅದರ ವೇಗವೂ ಇಳಿಮುಖವಾಗುವುದು. "ಭಾವಾ, ನನ್ನನ್ನು ದುರ್ಬಲಳೆಂದು ಎಣಿಸಬೇಡ. ಮನಸ್ಸಿನೊಳಗೆ ಪ್ರತಿಜ್ಞೆ ದೃಢವಾಗಿಯೇ ಇದೆ" ಎನ್ನುವಳು.

"ಅರ್ಥಾತ್?"

"ಅರ್ಥಾತ್ ಇಲ್ಲಿ ಡಿಗ್ರಿ ಪಡೆದುಕೊಂಡು ಡಾಕ್ಟರೀ ಕಲಿಯಲು ಯುರೋಪಿಗೆ ಹೋಗುವೆ?"

"ಆಮೇಲೆ?"

"ಆಮೇಲೆ ಆಸ್ಪತ್ರೆ ಸ್ಥಾಪನೆ ಮಾಡಿ ಅದರ ಹೊಣೆ."

"ಇನ್ನೂ ಯಾರ ಹೊಣೆ ವಹಿಸುವೆ. ಅದೇ ಆ ನೀರದ ಮುಖರ್ಜಿ ಎಂಬ ಒಬ್ಬ ಇನ್‌ಸಫರೆಬಲ್-"

ಶಶಾಂಕನ ಬಾಯಿ ಮುಚ್ಚಿ ಊರ್ಮಿ "ಸುಮ್ಮನಿರು. ಇಂತಹ ಮಾತನ್ನೆಲ್ಲ ಆಡಿದರೆ ನಿನ್ನ ಸಂಗಡ ದೊಡ್ಡ ಜಗಳ ಆಗುವುದು" ಎನ್ನುವಳು.

"ನಾನು ಸತ್ಯವಂತಳಾಗಬೇಕು. ನಾನು ಸತ್ಯವಂತಳಾಗಬೇಕು" ಎಂದು ಊರ್ಮಿ ತನಗೆ ತಾನೇ ಕಠಿಣವಾಗಿ ಹೇಳಿಕೊಳ್ಳುವಳು. ನೀರದನೊಡನೆ ಅವಳ ಸಂಬಂಧವನ್ನು ಅಪ್ಪ ಸ್ವತಃ ಗೊತ್ತುಮಾಡಿದ್ದರಲ್ಲ ಅದರ ವಿಷಯವಾಗಿ ಶುದ್ಧವಾಗಿರದಿದ್ದರೆ ಅಸತೀತ್ವವಾಗುವುದೆಂದು ಅವಳ ಎಣಿಕೆ.

ಆದರೆ ಎರಡನೆಯ ವ್ಯಕ್ತಿ ಯಾವ ತರಹದ ಬೆಂಬಲ ಕೊಡದಿದ್ದುದೇ ಕಷ್ಟಕರವಾಗಿತ್ತು. ಊರ್ಮಿಯು, ನೆಲದಲ್ಲಿ ನಿಂತು ಆಕಾಶದ ಗಾಳಿ ಬೆಳಕಿನಿಂದ ವಂಚಿತವಾಗಿ ಎಲೆಯೆಲ್ಲ ಬಿಳುಪೇರಿದ ಗಿಡದ ಹಾಗಾಗಿದ್ದಳು. ಒಮ್ಮೊಮ್ಮೆ ಅಸಹಿಷ್ಣುವಾಗುವಳು. 'ಈ ಮನುಷ್ಯ ಕಾಗದವನ್ನು ಬರೆಯು ಬಾರದೇ?' ಎಂದು ಮನಸ್ಸಿನಲ್ಲಿ ಅಂದುಕೊಳ್ಳುವಳು.

ಊರ್ಮಿ ಬಹುದಿನ ಕಾನ್‌ವೆಂಟಿನಲ್ಲಿ ಓದಿದ್ದಳು. ಇನ್ನೇನೂ ಇಲ್ಲದಿದ್ದರೂ ಇಂಗ್ಲೀಷಿನಲ್ಲಿ ಅವಳಿಗೆ ಒಳ್ಳೆಯ ಜ್ಞಾನವಿತ್ತು. ಆ ಸಂಗತಿ ನೀರದನಿಗೆ ತಿಳಿದಿತ್ತು. ಆದ್ದರಿಂದಲೇ ಇಂಗ್ಲೀಷಿನಲ್ಲಿ ಬರೆದು ವಶಪಡಿಸಿಕೊಳ್ಳಬೇಕೆಂದು ನೀರದನ ಪ್ರತಿಜ್ಞೆ. ಬಂಗಾಳಿಯಲ್ಲಿ ಕಾಗದ ಬರೆದಿದ್ದರೆ ಆಪತ್ತಿನಿಂದ ಪಾರಾಗುವ. ಆದರೆ ತನಗೆ ಇಂಗ್ಲೀಷು ಬರದೆಂಬ ಸಂಗತಿಯನ್ನು ಆ ಬಡಪಾಯಿ ಅರಿಯ. ದೊಡ್ಡ ದೊಡ್ಡ ಶಬ್ದಗಳನ್ನು ಆರಿಸಿ ತಂದು ಪುಸ್ತಕದಲ್ಲಿನ ಉದ್ದುದ್ದವಾದ ವಾಕ್ಯಗಳನ್ನು ಶೇಖರಿಸಿ ಹೇರು ತುಂಬಿದ ಎತ್ತಿನ ಗಾಡಿಯಂತೆ ತನ್ನ ವಾಕ್ಯಗಳನ್ನು ಜೋಡಿಸುವನು. ಊರ್ಮಿಗೆ ನಗು ಬರುವುದು. ಆದರೆ ನಗಲು ಅವಳು ನಾಚುವಳು. ಬಂಗಾಲಿಗಳ ಇಂಗ್ಲೀಷಿನಲ್ಲಿ ತಪ್ಪಾದರೆ ಅದನ್ನು ಲೆಕ್ಕಿಸುವುದು ಪೂರ್ತಾ 'ಸ್ನಾಭಿಶ್' ಎಂದು ತನ್ನನ್ನು ತಾನು ಧಿಕ್ಕರಿಸುವಳು.

ದೇಶದಲ್ಲಿದ್ದಾಗ ನೀರದನು ಪ್ರತ್ಯಕ್ಷವಾಗಿ ಘಳಿಗೆಘಳಿಗೆಗೆ ಸದುಪದೇಶ ಮಾಡುವನಲ್ಲ ಅವನ ಆಚಾರ ವ್ಯವಹಾರದಿಂದ ಅವು ಮಹತ್ತಾದ ಗೌರವವನ್ನು ಹೊಂದುವವು. ಕಿವಿಯಲ್ಲಿ ಕೇಳಿದ್ದಕ್ಕಿಂತ ಅದರ ತೂಕ ಹೆಚ್ಚಾಗಿ ತೋರುವುದು. ಆದರೆ ಉದ್ದವಾದ ಕಾಗದದಲ್ಲಿ ಆಳತೆಯ ಎಲ್ಲಿಯಿರದು. ಮಹತ್ತಾದ ವಿಷಯಗಳು ಹಗುರವಾಗಿಬಿಡುವವು. ದೊಡ್ಡ ದೊಡ್ಡ ಧ್ವನಿ ಮಾತ್ರ ಕಾಣಬರುವುದು. ಹೇಳುವ ವಿಷಯ ಕಡಮೆ.

ನೀರದ ಹತ್ತಿರವಿದ್ದಾಗ ಅವನ ಸ್ವಭಾವವನ್ನು ಸಹಿಸಿದ್ದಳಲ್ಲ ದೂರ ದಲ್ಲಿದ್ದಾಗ ಅದೇ ಅವಳಲ್ಲಿ ಗೊಂದಲವುಂಟುಮಾಡುತ್ತಿತ್ತು. ಆ ಮನುಷ್ಯ ಸಂಪೂರ್ಣವಾಗಿ ನಗಲಾರದವ. ಕಾಗದದಲ್ಲಿ ಆ ಅಭಾವ ಎಲ್ಲಕ್ಕೂ ದೊಡ್ಡ ದಾಗಿ ಕಾಣುತ್ತಿತ್ತು. ಈ ವಿಷಯವನ್ನೇ ಎತ್ತಿಕೊಂಡು ಶಶಾಂಕನೊಡನೆ ಅವನ ಹೋಲಿಕೆ ಅವಳ ಮನದಲ್ಲಿ ತಾನಾಗಿ ಏಳುತ್ತಿತ್ತು.

ಹೋಲಿಕೆಯ ಸಂದರ್ಭವೊಂದು ಅಂದೇ ಆಕಸ್ಮಾತ್ತಾಗಿ ಘಟಿಸಿತು. ಬಟ್ಟೆ ಹುಡುಕಲು ಯತ್ನಿಸಿ ಪೆಟ್ಟಿಗೆಯ ಅಡಿಯಿಂದ ಪಶ್ಮಿಯಲ್ಲಿ ಹೆಣೆದು ಪೂರ್ತಿಯಾಗದ ಮೆಟ್ಟಿನ ಜೊತೆ ಹೊರಬಿತ್ತು. ನಾಲ್ಕು ವರ್ಷಗಳ ಹಿಂದಿನ ಸಂಗತಿ ನೆನಪಾಯಿತು. ಆಗ ಹೇಮಂತ ಬದುಕಿದ್ದ. ಅವರೆಲ್ಲ ಒಟ್ಟಿಗೆ ದಾರ್ಜಿಲಿಂಗಿಗೆ ಹೋಗಿದ್ದರು. ಆಮೋದದ ಕೊನೆಯೇ ಇರಲಿಲ್ಲ. ಹೇಮಂತ ಶಶಾಂಕ ಇಬ್ಬರೂ ಕೂಡಿ ಹಾಸ್ಯ ಕೌತುಕದ ಹುಚ್ಚು ಹೊಳೆ ಹರಿಸಿದ್ದರು. ಊರ್ಮಿ ತನ್ನ ಸೋದರತ್ತೆಯ ಹತ್ತಿರದಿಂದ ಪಶ್ಮಿ ಹೆಣೆಯುವುದನ್ನು ಹೊಸ ದಾಗಿ ಕಲಿಯುತ್ತಿದ್ದಳು. ಹುಟ್ಟಿದ ಹಬ್ಬದಂದು ಅಣ್ಣನಿಗೆ ಕೊಡಲೆಣಿಸಿ ಒಂದು ಜೊತೆ ಮೆಟ್ಟು ಹೆಣೆಯುತ್ತಿದ್ದಳು. ಅದನ್ನೆತ್ತಿಕೊಂಡು ಶಶಾಂಕ ಅವಳನ್ನು ಸದಾ ಲೇವಡಿ ಮಾಡುವ. "ಅಣ್ಣನಿಗೆ ಏನನ್ನಾದರೂ ಕೊಡು. ಆದರೆ ಮೆಟ್ಟನ್ನು ಮಾತ್ರ ಕೊಡಬೇಡ. ಅದರಿಂದ ಹಿರಿಯರಿಗೆ ಅವಮಾನ ವಾಗುವುದೆಂದು ಭಗವಾನ್ ಮನು ಹೇಳಿರುವನು" ಎಂದನು. ಊರ್ಮಿ ಹಾಸ್ಯಕ್ಕಿಳಿದು "ಹಾಗಾದರೆ ಯಾರ ಮೇಲೆ ಪ್ರಯೋಗಿಸಬೇಕೆಂದು ಭಗ ವಾನ್ ಮನುವಿನ ಅಪ್ಪಣೆಯಾಗಿದೆ" ಎಂದಳು.

ಶಶಾಂಕನು ಗಂಭೀರ ಭಾವದೊಡನೆ– "ಅವಮಾನದ ಸನಾತನ ಅಧಿ ಕಾರ ಅಕ್ಕನ ಗಂಡನದು. ನನ್ನ ಸಾಲ ಇದೆ. ಅದು ಬಡ್ಡಿಯೊಡನೆ ಬೆಳೆಯು ತ್ತಿದೆ" ಎಂದನು.

"ನೆನಪಾಗದಲ್ಲ.''

"ಆಗುವ ಸಂಗತಿಯಲ್ಲ. ಆಗ ಏನೇನೂ ಅರಿಯದವಳಾಗಿದ್ದೆ. ಆದ್ದ ರಿಂದಲೇ ನಿಮ್ಮ ಅಕ್ಕನ ಸಂಗಡ ಶುಭಲಗ್ನದಲ್ಲಿ ಯಾವತ್ತು ಈ ಸೌಭಾಗ್ಯ ಶಾಲಿಯ ಮದುವೆಯಾಯಿತೊ, ಅಂದು ಒಸಗೆಯ ಮನೆಯ ಯಾಜಮಾನ್ಯ ವಹಿಸಲಾಗದೆ ಹೋದೆ. . ಇಂದು ಆ ಕೋಮಲ ಕರಪಲ್ಲವದ ಕುಚೇಷ್ಟೆ ಆ ಕರಪಲ್ಲವಗಳಿಂದ ಹೆಣೆದ ಮೆಟ್ಟಿನ ರೂಪ ತಾಳಿದೆ. ಅವುಗಳ ಮೇಲೆ ನನ್ನ ಹಕ್ಕಿದೆ- ತಿಳಿಸಿರುವೆನು.''

ಹಕ್ಕು ಸ್ಥಾಪನೆಯಾಗಲಿಲ್ಲ. ಆ ಮೆಟ್ಟುಗಳು ಸಕಾಲದಲ್ಲಿ ಕಾಣಿಕೆ ಯಾಗಿ ಅಣ್ಣನ ಕಾಲಿಗೆ ಅರ್ಪಿತವಾದುವು. ಆ ಮೇಲೆ ಕೆಲವು ದಿನಗಳ ನಂತರ ಶಶಾಂಕನ ಹತ್ತಿರದಿಂದ ಒಂದು ಕಾಗದ ಬಂದಿತು. ನೋಡಿ ತುಂಬ ನಕ್ಕಳು. ಆ ಕಾಗದ ಈಗಲೂ ಅವಳ ಪೆಟ್ಟಿಗೆಯಲ್ಲಿದೆ ಇಂದು ತೆಗೆದು ಮತ್ತೆ ಓದಿದಳು:

"ನೆನ್ನೆ ನೀನು ಹೊರಟು ಹೋದೆ. ನಿನ್ನ ನೆನಪು ಹಳೆಯದಾಗುವುದ ರಲ್ಲಿ ನಿನ್ನ ಹೆಸರಿನಲ್ಲಿ ಒಂದು ಕಳಂಕ ಪ್ರಸಿದ್ಧವಾಗಿದೆ. ಅದನ್ನು ನಿನ್ನ ಹತ್ತಿರ ಮರೆಮಾಡುವುದು ಸರಿಯಲ್ಲವೆಂದು ಎಣಿಸುತ್ತೇನೆ.

ನನ್ನ ಕಾಲುಗಳಲ್ಲಿ ಒಂದು ಜೊತೆ ತಾಲತಲ್ಲಾದ ಮೆಟ್ಟುಗಳಿರುವುದು ಅನೇಕರು ಕಂಡಿರುವರು. ಹಾಗೆಯೇ ಅದರ ಛಿದ್ರವನ್ನು ಭೇದಿಸಿ ಕೊಂಡು ನನ್ನ ಚರಣ ನಖದ ಸಾಲು ಮೇಘಮುಕ್ತ ಚಂದ್ರಮಾಲೆಯಂತೆ ಹೊರಬಿದ್ದಿರುವುದನ್ನೂ ಅನೇಕರು ಲಕ್ಷಿಸಿರುವರು. ಉಪಮೆಯ ಯಥಾರ್ಥ ತೆಯ ವಿಷಯವಾಗಿ ಸಂದೇಹವಾದರೆ ನಿಮ್ಮ ಅಕ್ಕನಲ್ಲಿ ವಿಚಾರಿಸಬಹುದು. ಇಂದು ಬೆಳಿಗ್ಗೆ ನಮ್ಮ ಆಫೀಸಿನ ವೃಂದಾವನ ನಂದಿ ನನ್ನ ಸಪಾದುಕ ಚರಣ ಗಳನ್ನು ಮುಟ್ಟಿ ನಮಸ್ಕರಿಸಿದಾಗ ನನ್ನ ಪದ ಮರ್ಯಾದೆಯ ಛಿದ್ರ ಪ್ರಕಟ ವಾಯಿತಲ್ಲ ಅದರ ಅವಮಾನ ಮನಸ್ಸಿನಲ್ಲಿ ಆಂದೋಳನವನ್ನೆಬ್ಬಿಸಿತು. ಆಳನ್ನು ವಿಚಾರಿಸಿದೆ. "ಮಹೇಶ ನನ್ನ ಆ ಇನ್ನೊಂದು ಜೊತೆ ಮತ್ತಾವ ಅನಧಿಕಾರಿಯ ಶ್ರೀಚರಣಗಳನ್ನು ಅಲಂಕರಿಸಿದುವು" ಎಂದು ಕೇಳಿದೆ. ಅವನು ತಲೆ ಕೆರೆಯುತ್ತ "ಆ ಮನೆಯ ಊರ್ಮಿ ಅಕ್ಕನವರ ಸಂಗಡ ನೀವು ಡಾರ್ಜಿಲಿಂಗ್ ಹೋಗಿದ್ದಿರಲ್ಲ ಆಗ ಮೆಟ್ಟಿನ ಜೊತೆಯೂ ಸಂಗಡಹೋಗಿತ್ತು. ತಾವು ಹಿಂತಿರುಗಿ ಬಂದಿರಿ. ತಮ್ಮ ಸಂಗಡ ಆ ಜೊತೆಯಲ್ಲಿ ಒಂಟಿ ಮಾತ್ರ ಹಿಂತಿರುಗಿತು. ಇನ್ನೊಂದು ಒಂಟಿ –" ಅವನ ಮುಖ ಕೆಂಪಡರಿತು. ನಾನು ಗದರಿಸಿಕೊಂಡು "ಸಾಕು-ಮುಚ್ಚು" ಎಂದೆನು. ಅಲ್ಲಿ ಬಹುಜನಗಳಿದ್ದರು. ಮೆಟ್ಟನ್ನು ಹಾರಿಸುವದು ಹೀನ ಕಾರ್ಯ. ಆದರೆ ಮನುಷ್ಯರ ಮನಸ್ಸು ದುರ್ಬಲವಾದದ್ದು, ಆಶೆ ತಡೆಯಲಸಾಧ್ಯವಾದುದು, ಇಂತಹ ಕೆಲಸ ಮಾಡಿಸುವದು, ಈಶ್ವರ ಕ್ಷಮಿಸುವನೆಂದು ಎಣಿಸುತ್ತೇನೆ. ಆಗಲೂ ಹಾರಿಸು ವಿಕೆಯಲ್ಲಿ ಬುದ್ಧಿವಂತಿಕೆಯಾದರೂ ತೋರಿದ್ದರೆ ಕೆಟ್ಟ ಕೆಲಸದ ಗ್ಲಾನಿ ಮರೆಯಾಗುತ್ತಿತ್ತು. ಆದರೆ ಒಂಟಿ ಮೆಟ್ಟೇ-! ಅಯ್ಯೋ !!!

ಈ ಕೆಲಸವನ್ನು ಯಾರು ಮಾಡಿದರೋ ಸಾಧ್ಯವಾದ ಮಟ್ಟಿಗೆ ಅವರ ಹೆಸರನ್ನು ಊಹಿಸಿರುವೆ. ಆ ವ್ಯಕ್ತಿ ತನ್ನ ಸ್ವಭಾವ ಸಿದ್ಧವಾದ ಬಾಯಿಬಡಕ ತನದಿಂದ ಈ ವಿಷಯವಾಗಿ ಅನಾವಶ್ಯಕವಾದ ವಾಗ್ವಾದಕ್ಕೆ ತೊಡಗಿದರೆ ಸಂಗತಿ ಘಂಟಾಘೋಷವಾಗಿ ಎಲ್ಲರಿಗೂ ತಿಳಿಯುವುದು. ಮೆಟ್ಟಿಗಾಗಿ ವೊಂಡಾಟ ಮನಸ್ಸು ಮಲಿನವಾಗಿಲ್ಲದೆಡೆಯಲ್ಲೇ ಮಾನ್ಯ. ಮಹೇಶನಂತಹ ನಿಂದಕರ ಬಾಯನ್ನು ಒಂದು ಜೊತೆ ಹೆಣಿಗೆಯ ಮೆಟ್ಟಿನ ಸಹಾಯದಿಂದ ಈಗಲೇ ಮುಚ್ಚಬಹುದು. ಆ ವ್ಯಕ್ತಿಯ ಇಷ್ಟು ಕಾಲಿನ ಅಳತೆ ಇದರ ಸಂಗಡಲೇ ಕಳಿಸಿದೆ.

ಕಾಗದ ಬರಲು ಊರ್ಮಿ ನಗುಮುಖದೊಡನೆ ಪಶ್ಮಿಯ ಮೆಟ್ಟನ್ನು ಹೆಣಿಯಲು ಕುಳಿತಿದ್ದಳು. ಆದರೆ ಕೆಲಸ ಪೂರ್ಣ ಮಾಡಲಿಲ್ಲ. ಅಲ್ಲಿಂದ ಮುಂದೆ ಪಶ್ಮಿಯ ಹೆಣಿಗೆಯಲ್ಲಿ ಅವಳಿಗೆ ಉತ್ಸಾಹವಿರಲಿಲ್ಲ. ಇಂದು ಅವು ಸಿಕ್ಕಲು ಈ ಮೆಟ್ಟುಗಳನ್ನು ಪೂರಾ ಹೆಣೆದು ದಾರ್ಜಿಲಿಂಗ್ ಹೋಗಿ ಬಂದ ತಾರೀಕಿನ ನೆನಪಿಗಾಗಿ ಶಶಾಂಕನಿಗೆ ಕೊಡುವುದಾಗಿ ತೀರ್ಮಾನಿಸಿದಳು. ಕೆಲವೇ ವಾರಗಳಲ್ಲಿ ಆ ತಾರೀಕು ಬರಲಿದೆ. ಗಭೀರವಾದೊಂದು ನಿಟ್ಟುಸಿರು ಹೊರಟಿತು. ಅಯ್ಯೋ- ಆ ಹಾಸ್ಯೋಜ್ವಲ ಆಕಾಶದಲ್ಲಿ ಹಗುರವಾದ ರೆಕ್ಕೆಗಳೊಡನೆ ಹಾರಾಡುತ್ತಿದ್ದ ಆ ದಿನಗಳೆಲ್ಲಿ? ಈಗ ಇದಿರಿನಲ್ಲಿ ಕಾಣುವುದು ಕರ್ತವ್ಯ ಕಠೋರವಾದ ಮರುಭೂಮಿಯ ಬಾಳುವೆ.

ಇಂದು ಫಾಲ್ಗುಣ ಶುದ್ಧ ಹುಣ್ಣಿಮೆ. ಓಕುಳಿ ಆಡುವ ದಿನ. ಪರಶ್ಥಳದ ಕೆಲಸದಿಂದ ಶಶಾಂಕನಿಗೆ ಈ ಆಟಕ್ಕೆ ಅವಕಾಶವಿರುತ್ತಿರಲಿಲ್ಲ. ಈ ಹಬ್ಬದ ಸಂಗತಿಯನ್ನು ಅವರುಗಳು ಸಂಪೂರ್ಣವಾಗಿ ಮರೆತಿದ್ದರು. ಊರ್ಮಿ ಇಂದು ಹಾಸಿಗೆ ಹಿಡಿದಿರುವ ಅಕ್ಕನ ಪಾದಗಳಿಗೆ ಅಬೀರದ ಬೊಟ್ಟಿಟ್ಟು ನಮ ಸ್ಕರಿಸಿದಳು. ಆಮೇಲೆ ಹುಡುಕುತ್ತ ಹುಡುಕುತ್ತ ಹೋಗಿ ಆಫೀಸ್ ರೂಮಿ ನಲ್ಲಿ ಶಶಾಂಕನನ್ನು ಕಂಡಳು. ಹಿಂದಿನಿಂದ ಹೋಗಿ ಅವನ ಹಣೆಗೆ ಅಬೀರ ವನ್ನು ಹಚ್ಚಿದಳು. ಮೇಜಿನ ಮೇಲಿದ್ದ ಕಾಗದಪತ್ರಗಳಿಗೆಲ್ಲ ಕೆಂಪು ಬಣ್ಣ ಹತ್ತಿತು. ಪೈಪೋಟಿ ಹತ್ತಿತು. ಮೇಜಿನೊಳಗೆ ಕೆಂಪು ಶಾಯಿ ಇತ್ತು. ಶಶಾಂಕನು ಅದನ್ನು ಊರ್ಮಿಯ ಶೀರೆಯ ಮೇಲೆ ಸುರಿದನು. ಕೈಯನ್ನು ಅದುಮಿ ಹಿಡಿದು ಅವಳ ಸೆರಗಿನಿಂದ ಗುಲಾಲನ್ನು ಕಿತ್ತುಕೊಂಡು ಅವಳ ಮುಖಕ್ಕೆಲ್ಲ ಬಳಿದನು. ಅನಂತರ ಓಡಾಟ, ಚೀರಾಟ, ಕಿತ್ತಾಟದ ಸರತಿ. ಹೊತ್ತಾಯಿತು. ಊಟದ ವೇಳೆ ಮೀರಿತು- ಊರ್ಮಿಯ ನಗೆಯ ಲಹರಿ

ಮನೆಯಲ್ಲಾ ತುಂಬಿತ್ತು. ಕೊನೆಗೆ ಶಶಾಂಕನ ಆರೋಗ್ಯ ಕೆಡುವ ಹೆದರಿಕೆ ಯಿಂದ ಆಳಿನ ಮೇಲೆ ಆಳು ಕಳಿಸಿ ಶರ್ಮಿಳೆ ಇವರುಗಳ ಆಟ ನಿಲ್ಲಿಸಿದಳು.

ಹಗಲು ಕಳೆಯಿತು. ರಾತ್ರಿ ಬಲು ಹೊತ್ತಾಗಿತ್ತು ಹೂತುಂಬಿದ ಗಿಡಗಳ ಮೇಲೆ ವಿಶಾಲ ಆಕಾಶದಲ್ಲಿ ಪೂರ್ಣ ಚಂದ್ರ ಉದಯಿಸಿರುವನು. ಅಕಸ್ಮಾತ್ತಾಗಿ ಫಾಲ್ಗುಣದ ಮಂದ ಮಾರುತನ ಝುರ ಝುರ ಶಬ್ದದಿಂದ ತೋಟ, ಗಿಡ, ಮರಗಳೆಲ್ಲ ಅಲುಗುತ್ತಿವೆ. ಕೆಳಗಿನ ನೆರಳೂ ಅದರೊಡನೆ ಜೊತೆಯಾಗುತ್ತಿದೆ. ಕಿಟಕಿಯ ಬಳಿ ಊರ್ಮಿ ಸುಮ್ಮನೆ ನಿಂತಿರುವಳು. ಏನಾದರೂ ನಿದ್ದೆ ಬಾರದು. ಎದೆಯೊಳಗೆ ರಕ್ತದ ವೇಗ ಅಡಗಲಿಲ್ಲ. ಮಾವಿನ ಚಿಗುರುಗಳ ಸುಗಂಧದಿಂದ ಮನಸ್ಸು ಆನಂದವಾಗುವುದು. ಇದು ವಸಂತ ಮಾಧವೀಲತೆಯ ಗಿಣ್ಣು ಗಿಣ್ಣುಗಳಲ್ಲಿ ಹೂಬಿಡುವ ವೇದನೆಯಾಗುವುದಗಲ್ಲ ಅದೇ ವೇದನೆ ಊರ್ಮಿಯ ಸಮಸ್ತ ದೇಹವನ್ನೂ ಒಳಗಿನಿಂದ ಚಂಚಲ ಗೊಳಿಸುತ್ತಿತ್ತು. ಪಕ್ಕದ ಸ್ನಾನದ ಮನೆಗೆ ಹೋಗಿ ತಲೆ ತೊಳೆದುಕೊಂಡಳು. ಒದ್ದೆ ಟವಲಿನಿಂದ ಮೈ ಒರಿಸಿಕೊಂಡಳು. ಹಾಸಿಗೆಯಲ್ಲಿ ಮಲಗಿ ಅತ್ತ ಇತ್ತ ಹೊರಳುತ್ತ ಸ್ವಲ್ಪ ಹೊತ್ತಿನ ನಂತರ ಸ್ವಪ್ನದಿಂದ ತುಂಬಿದ ನಿದ್ರೆಯಲ್ಲಿ ಮಗ್ನಳಾದಳು.

ರಾತ್ರಿ ಮೂರರ ವೇಳೆಯಲ್ಲಿ ನಿದ್ರೆಯಿಂದ ಎಚ್ಚತ್ತಳು. ಚಂದ್ರ ಆಗ ಕಿಟಕಿಯ ಇದರಿನಲ್ಲಿ ಇಲ್ಲ. ಕೊಠಡಿಯಲ್ಲಿ ಕತ್ತಲೆ. ಹೊರಗೆ ನೆಳಲುಬೆಳ ಕಿನಲ್ಲಿ ಕಲೆತ ಅಡಕೆಯ ಮರಗಳು. ಊರ್ಮಿಯ ಎದೆಯೊಡೆದು ಅಳು ಹೊರಬಿದ್ದಿತು. ಎಷ್ಟಕ್ಕೂ ಅಡಗಲಿಲ್ಲ. ಬೋರಲಾಗಿ ಬಿದ್ದುಕೊಂಡು ದಿಂಬಿ ನಲ್ಲಿ ಮುಖ ಮುಚ್ಚಿಕೊಂಡು ಅಳಲಾರಂಭಿಸಿದಳು. ಪ್ರಾಣದ ಈ ಅಳು, ಭಾಷೆಯಲ್ಲಿ ಇದಕ್ಕೆ ಶಬ್ದವಿಲ್ಲ; ಅರ್ಥವಿಲ್ಲ ಕೇಳಿದ್ದಾದರೆ ಅವಳ ಮನಸ್ಸಿ ನಲ್ಲಿ ಹಗಲ ಕೆಲಸ, ರಾತ್ರಿಯ ನಿದ್ರೆಯನ್ನು ಹೊಡೆದುಕೊಂಡು ಹೋಗುವ ಈ ವೇದನೆಯ ಹೊಳೆ ಎಲ್ಲಿಂದ ಏರಿ ಬಂದಿತು ಎಂಬುದನ್ನು ಅವಳು ವರ್ಣಿಸಬಲ್ಲಳೇ?

ಬೆಳಗ್ಗೆ ಊರ್ಮಿ ನಿದ್ರೆಯಿಂದ ಎಚ್ಚತ್ತಾಗ ಕೊಠಡಿಯೊಳಗೆ ಬಿಸಿಲು ಬೀಳುತ್ತಿತ್ತು. ಬೆಳಗಿನ ಕೆಲಸಕ್ಕೆ ಸೊನ್ನೆ ಬಿದ್ದಿತು. ದಣುವಿನ ಸಂಗತಿ ಜ್ಞಾಪಿಸಿಕೊಂಡು ಶರ್ಮಿಳೆ ಅವಳನ್ನು ಕ್ಷಮಿಸಿದಳು. ಯಾವುದೋ ಸಂಕಟ ದಿಂದ ಇಂದು ಊರ್ಮಿ ಬಲು ನೊಂದಿರುವಳು. ಏಕೋ ಆವಳ ಸೋಲಾ

ಗುತ್ತಿದೆಯೆಂದು ಅವಳಿಗೆ ಅರಿವಾಗುತ್ತಿದೆ. ಅಕ್ಕನ ಬಳಿಗೆ ಹೋಗಿ "ಅಕ್ಕ ನಾನಂತೂ ನಿನ್ನ ಕೆಲಸ ಏನೇನೂ ಮಾಡಲಾರದೆ ಹೋದೆ. ಮನೆಗೆ ಹಿಂತಿರುಗಲೇ ಹೇಳು- "

ಇಂದು ಶರ್ಮಿಳೆ 'ಹೋಗಬೇಡ' ಎಂದು ಹೇಳಲಾರಳು. "ಒಳ್ಳೇದು ಹೋಗು, ನಿನ್ನ ಪಾಠಪ್ರವಚನ ನಷ್ಟವಾಗುತ್ತೆ, ಮಧ್ಯೆ ಮಧ್ಯೆ ವಿರಾಮ ಸಿಕ್ಕಿದರೆ ಬಂದು ವಿಚಾರಿಸಿಕೊಂಡು ಹೋಗು" ಎಂದಳು.

ಶಶಾಂಕ ಆಗ ಕೆಲಸದ ಮೇಲೆ ಹೊರಗೆ ಹೋಗಿದ್ದ. ಆ ಸಂದರ್ಭ ದಲ್ಲಿ ಅಂದೇ ಊರ್ಮಿ ಮನೆಗೆ ಹೊರಟು ಹೋದಳು.

ಶಶಾಂಕ ಅಂದು ಪ್ಲ್ಯಾನುಗಳನ್ನು ಬರೆಯಲು ಬೇಕಾಗುವ ಸಲಕರಣೆ ಗಳ ಪೆಟ್ಟಿಗೆಯೊಂದನ್ನು ಊರ್ಮಿಗೆ ಕೊಡಲು ಕೊಂಡು ಮನೆಗೆ ತಂದನು. ಅವಳಿಗೆ ಆ ವಿದ್ಯೆ ಕಲಿಸುವುದಾಗಿ ಹೇಳಿದ್ದನು. ಹಿಂತಿರುಗಿ ಅವಳನ್ನು ಯಥಾಸ್ಥಾನದಲ್ಲಿ ಕಾಣದಿರಲು ಶರ್ಮಿಳೆಯ ಕೊಠಡಿಗೆ ಬಂದು "ಊರ್ಮಿ ಎತ್ತ ಹೋದಳು" ಎಂದು ಕೇಳಿದನು.

'ಇಲ್ಲಿ ಅವಳ ಓದಿಗೆ ಅನಾನುಕೂಲ ಆಗುವುದೆಂದು ಅವಳು ಮನೆಗೆ ಹೋದಳು' ಎಂದು ಶರ್ಮಿಳೆ ಹೇಳಿದಳು.

ಕೆಲವು ದಿನಗಳು ಅನಾಲುಕೂಲ ಆಗುವುದೆಂದು ತಿಳಿದೇ ಸಿದ್ಧವಾಗಿ ಬಂದಿದ್ದಳು. ಅನಾನುಕೂಲದ ಸಂಗತಿ ಇವತ್ತೇ ಏಕೆ ಮನಸ್ಸಿನಲ್ಲಿ ಉದಯ ವಾಯಿತು;

ಮಾತಿನ ಧ್ವನಿ ಕೇಳಿ ಶಶಾಂಕನು ತನ್ನ ಮೇಲೆ ಸಂದೇಹಪಟ್ಟಿರುವ ನೆಂದು ಶರ್ಮಿಳೆ ಅರಿತಳು. ಆ ವಿಷಯವಾಗಿ ಯಾವ ವಿಧವಾದ ವ್ಯರ್ಥದ ತರ್ಕವನ್ನು ಮಾಡದೆ " ನನ್ನ ಹೆಸರು ಹೇಳಿ ನೀವು ಅವಳನ್ನು ಕರೆದು ತನ್ನಿ. ಖಂಡಿತ ಏನೂ ಆಕ್ಷೇಪಣೆ ಮಾಡಳು" ಎಂದಳು.

ಊರ್ಮಿ ಮನೆಗೆ ಹಿಂತಿರುಗಿ ಹೋಗಿ ನೋಡಲು, ಅನೇಕ ದಿನಗಳ ನಂತರ ವಿಲಾಯತಿಯಿಂದ ಅವಳ ಹೆಸರಿಗೆ ನೀರದನಿಂದ ಕಾಗದ ಬಂದು ಕಾದಿದ್ದು ದನ್ನು ಕಂಡಳು. ಭಯದಿಂದ ಒಡೆಯಲಾರದೆ ಹೋದಳು. ತನ್ನಿಂದ ಅಪ ರಾಧ ಒಟ್ಟುಗೂಡಿದೆಯೆಂದು ಮನಸ್ಸಿನಲ್ಲಿ ಬಲ್ಲಳು. ನಿಯಮ ತಪ್ಪಿದ್ದಕ್ಕೆ ಸಮಾಧಾನದ ರೂಪಿನಲ್ಲಿ ಹಿಂದೆ ಅಕ್ಕನ ಕಾಯಿಲೆಯ ಸಂಗತಿ ಬರೆದಿದ್ದಳು.

ಕೆಲ ದಿನಗಳಿಂದ ಈ ಸಬೂಬು ಹುಳ್ಳಾಗಿತ್ತು. ಶಶಾಂಕನು ಬಲಾತ್ಕಾರದಿಂದ ಹಗಲಿನಲ್ಲಿ ಒಬ್ಬಳು, ರಾತ್ರಿಯಲ್ಲಿ ಒಬ್ಬಳಂತೆ ಇಬ್ಬರು 'ನರ್ಸ್'ಗಳನ್ನು ನಿಯಮಿಸಿದ್ದನು. ಡಾಕ್ಟರ ಅಪ್ಪಣೆಯಂತೆ ರೋಗಿಷ್ಠೆಯ ಕೊಠಡಿಗೆ ಸದಾ ನೆಂಟರ ಸಂಚಾರವನ್ನು ಅವರುಗಳು ತಡೆಯುತ್ತಿದ್ದರು.

ನೀರದನು ಅಕ್ಕನ ಕಾಯಿಲೆಯ ಸಬೂಬು ಮಹತ್ವವಾದುದೆಂದು ಎಣಿಸ ನೆಂದು ಊರ್ಮಿ ಬಲ್ಲಳು. 'ಅದೆಲ್ಲ ಕೆಲಸಕ್ಕೆ ಬಾರದ ಮಾತು' ಎನ್ನುವನು. ನಿಜವಾಗಿ ಉಪಯೋಗವಿಲ್ಲದ ಮಾತೇ. ಪಶ್ಚಾತ್ತಾಪದಿಂದ ತುಂಬಿದ ಮನ ಮೊಡನೆ 'ಈ ನಲ ತಪ್ಪನ್ನು ಒಪ್ಪಿಕೊಂಡು ಕ್ಷಮೆ ಬೇಡುವೆನು' ಇನ್ನೆಂದೂ ತಪ್ಪು ಮಾಡೆನು. ಯಾವ ಕಾರಣದಿಂದಲೂ ನಿಯಮ ಭಂಗವಾಗದು ಎಂದು ಹೇಳುವೆನು, ಎಂದು ತೀರ್ಮಾನಿಸಿದಳು.

ಕಾಗದ ಒಡೆಯುವ ಮುಂಚೆ ಬಹು ದಿನಗಳ ನಂತರ ಆ ಫೋಟೋ ವನ್ನು ಹೊರಕ್ಕೆ ತೆಗೆದಳು. ಮೇಜಿನ ಮೇಲಿಟ್ಟಳು. ಆ ಪಠವನ್ನು ನೋಡಿ ಶಶಾಂಕನು ಅಪಾರವಾಗಿ ತೀವಡಿ ಮಾಡುವನೆಂಬುದನ್ನು ಬಲ್ಲಳು. ಆದರೂ ಅವನ ತೀವಡಿಯಿಂದ ಊರ್ಮಿ ನಾಚಿಕೊಳ್ಳಳು. ಇದೇ ಅದಕ್ಕೆ ಪ್ರಾಯಶ್ಚಿತ್ತ. ನೀರದನೊಡನೆ ಅವಳ ಮದುವೆಯಾಗುವು ದೆಂಬ ವಿಷಯವನ್ನು ಅಕ್ಕನ ಮನೆಯವರು ಅಡಗಿಸಿಡುವರು. ಇತ ರರೂ ಈ ಮಾತನ್ನು ಎತ್ತುತ್ತಿರಲಿಲ್ಲ. ಈ ಸಂಗತಿ ಅಲ್ಲಿಯವರಿಗೆಲ್ಲಾ ಅಪ್ರಿಯ ವಾದುದು. ಇಂದು ಮುಷ್ಟಿಯನ್ನು ಭದ್ರವಾಗಿ ಹಿಡಿದುಕೊಂಡು ತನ್ನ ಎಲ್ಲ ವ್ಯವಹಾರವೂ ಈ ಸಂಗತಿಯನ್ನು ಘೋಷಿಸುವಂತೆ ಮಾಡುವೆನೆಂದು ತೀರ್ಮಾನಿಸಿದಳು. ಕೆಲದಿನಗಳಿಂದ 'ಎಂಗೆಜ್ ಮೆಂಟ್ ರಿಂಗ'ನ್ನು (ನಿಶ್ಚಿ ತಾರ್ಥದ ಗುರುತಿನ ಉಂಗುರ) ಮುಚ್ಚಿಟ್ಟಿದ್ದಳು ಅದನ್ನು ತೆಗೆದು ಬೆರಳಿಗೆ ಹಾಕಿಕೊಂಡಳು. ಉಂಗುರ ಸಾಮಾನ್ಯ ಬೆಲೆಯದು:– ನೀರದ ತನ್ನ ಸತ್ಯವಾದ ಬಡತನದ ಹೆಮ್ಮೆಯ ಮೂಲಕ ಆ ಸಾಮಾನ್ಯ ಬೆಲೆಯ ಉಂಗು ರದ ಬೆಲೆಯನ್ನು ವಜ್ರದ ಉಂಗುರಕ್ಕಿಂತ ಹೆಚ್ಚು ಮಾಡಿದ್ದನು. ಅರ್ಥವೇ ನೆಂದರೆ– "ಉಂಗುರದ ಬೆಲೆಯೇ ನನ್ನ ಬೆಲೆಯಲ್ಲ. ನನ್ನ ಬೆಲೆಯೇ ಉಂಗುರದ ಬೆಲೆ"

ಸಾಧ್ಯವಾದ ಮಟ್ಟಿಗೆ ಧೈರ್ಯವನ್ನು ತಂದುಕೊಂಡು ಊರ್ಮಿಯು ಅತಿ ಮೆಲ್ಲಗೆ ಲಕೋಟೆಯನ್ನು ಒಡೆದಳು.

ಕಾಗದ ಓದಿ ಹಠಾತ್ತಾಗಿ ಹೌಹಾರಿದಳು. ಕುಣಿಯೋಣವೆಂದು ಆಶೆಯಾಯಿತು ಆದರೆ ಕುಣಿಯಲು ಅವಳಿಗೆ ಅಭ್ಯಾಸವಿರಲಿಲ್ಲ. ಹಾಸಿಗೆಯ ಮೇಲೆ ಸಿತಾರಿತ್ತು ಆದನ್ನೆತ್ತಿಕೊಂಡು ಶ್ರುತಿ ಸರಿಪಡಿಸದೆಯೇ ಮನಸ್ಸಿಗೆ ತೋರಿದ್ದನ್ನು ಬಾರಿಸತೊಡಗಿದಳು.

ಈ ವೇಳೆಗೆ ಸರಿಯಾಗಿ ಶಶಾಂಕನು ಕೊಠಡಿಯೊಳಗೆ ಹೊಕ್ಕು 'ಸಂಗತಿಯೇನು. ಮದುವೆಯ ದಿನ ನಿಶ್ಚಯವಾಯಿತೇನು?' ಎಂದು ವಿಚಾರಿಸತೊಡಗಿದನು

"ಹೌದು ಭಾವಾ. ನಿಶ್ಚಯವಾಯಿತು"

"ಯಾವ ವಿಧದಲ್ಲೂ ಹಿಂದುಮುಂದಾಗದೋ?"

"ಯಾವ ವಿಧದಲ್ಲೂ ಇಲ್ಲ."

"ಹಾಗಾದರೆ ಈ ಹೊತ್ತೆ ಸಾನಾಯಿಯವನಿಗೆ ಮುಂಗಡ ಕೊಡುವೆ. ಇನ್ನು ಭೀಮಸಾಗನ ಅಂಗಡಿಯ ಮಿಠಾಯಿ?

"ನೀನು ಯಾವ ಪ್ರಯತ್ನವನ್ನೂ ಮಾಡಬೇಕಾಗಿಲ್ಲ."

"ಸ್ವತಃ ಎಲ್ಲ ಮಾಡುವೆಯೋ? ಶಹಬಾಷ್ ವೀರಾಂಗನೆ. ಮತ್ತೆ ಕನ್ಯೆಗೆ ಆಶೀರ್ವಾದ?

"ಆ ಆಶೀರ್ವಾದದ ಖರ್ಚು ನನ್ನ ಸ್ವಂತ ಜೇಬಿನಿಂದಲೇ ಹೊರಬಿದ್ದಿದೆ.

"ಮೀನಿನ ಎಣ್ಣೆಯಲ್ಲೇ ಮೀನು ಕರಿಯುವುದೇ ? ಸರಿಯಾಗಿ ಅರ್ಥವಾಗಲಿಲ್ಲ "

"ಇದೋ ತಗೋ. ಓದಿ ತಿಳಿದುಕೊ."

ಹೀಗೆ ಹೇಳಿ ಕಾಗದವನ್ನು ಅವನ ಕೈಯಲ್ಲಿ ಕೊಟ್ಟಳು. ಓದಿ ಶಶಾಂಕ ಓಹೋ ಓಹೋ ಎಂದು ನಗತೊಡಗಿದನು. ಆದರಲ್ಲಿ ಹೀಗೆ ಬರೆದಿತ್ತು. 'ಯಾವ ರೀಸರ್ಚ ದುರೂಹ ಕೆಲಸಕ್ಕೆ ನೀರದನು ಆತ್ಮನಿವೇದನ ಮಾಡಿಕೊಳ್ಳಲು ಆಶಿಸುವನೋ ಭಾರತವರ್ಷದಲ್ಲಿ ಅದು ಸಂಭವಿಸಲು ಅವಕಾಶವಿಲ್ಲ ಆದ್ದರಿಂದಲೇ ಅವನ ಬಾಳುವೆಯಲ್ಲಿ ಮತ್ತೊಂದು ಭಾರಿ ಸ್ಯಾಕ್ರಿಫೈಸ್ ಅಂಗೀಕರಿಸಬೇಕಾಯಿತು. ಊರ್ಮಿಯೊಡನೆ ಮದುವೆಯ ಸಂಬಂಧ ವಿಚ್ಛೇದ ಮಾಡದೆ ಮಾರ್ಗವೇ ಇಲ್ಲ. ಒಬ್ಬ ಐರೋಪ್ಯ ಮಹಿಳೆ ಅವನನ್ನು

ಲಗ್ನವಾಗಿ ಅವನ ಕೆಲಸದಲ್ಲಿ ಆತ್ಮದಾನ ಮಾಡಲು ಒಪ್ಪಿರುವಳು. ಆದರೆ ಕೆಲಸ ಒಂದೇ. ಭಾರತ ವರ್ಷದಲ್ಲಿಯೇ ಮಾಡಲಿ, ಇಲ್ಲೇ ಮಾಡಲಿ ಎರಡೂ ಒಂದೇ. ರಾಜಾರಾಮಬಾಬುಗಳು ಯಾವ ಕಾರ್ಯಕ್ಕಾಗಿ ಹಣ ಕೊಡಲು ಆಶಿಸಿದ್ದರು. ಅದರ ಸ್ವಲ್ಪ ಅಂಶವನ್ನು ಇದಕ್ಕೆ ಉಪಯೋಗಿಸಿದರೆ ಅನ್ಯಾಯ ವಾಗದು. ಅದರಿಂದ ಮೃತ ವ್ಯಕ್ತಿಯನ್ನು ಗೌರವಿಸಿದಂತೆಯೇ ಆಗುವುದು

'ಜೀವಿತ ವ್ಯಕ್ತಿಗೆ ಅಲ್ಪ ಸ್ವಲ್ಪ ಕೊಟ್ಟು ಆ ದೂರದೇಶದಲ್ಲೇ ದೀರ್ಘ ಕಾಲ ಬದುಕಿಸಲು ಸಾಧ್ಯವಾದರೆ ಅನ್ಯಾಯವಾಗದು. ಹಣ ನಿಲ್ಲಿಸಿದರೆ ಹಸಿವಿನ ಜ್ವಾಲೆಯಿದ ವಿಧಿಯಿಲ್ಲದೆ ಇಲ್ಲಿಗೆ ಓಡಿ ಬರುವನೆಂಬ ಭಯವಿದೆ' ಎಂದು ಶಶಾಂಕ ಹೇಳಿದನು.

ಊರ್ಮಿ ನಗುತ್ತ " ಆ ಭಯವೇನಾದರೂ ನಿನ್ನ ಮನದಲ್ಲಿ ಇದ್ದರೆ ನೀನೇ ಹಣ ಕೊಡು. ನಾನು ಒಂದು ಕಾಸನ್ನೂ ಕೊಡೆ."

"ಪುನಃ ಬದಲಾಯಿಸದೋ? ಮಾನಿನಿಯ ಹೆಮ್ಮೆ ಶಾಶ್ವತವಾಗಿರು ವುದೋ" ಎಂದನು ಶಶಾಂಕ.

"ಬದಲಾದರೆ ಅದರಿಂದ ನಿನಗೇನು ಭಾವ."

"ಪ್ರಶ್ನೆಗೆ ಸತ್ಯವಾದ ಉತ್ತರ ಕೊಟ್ಟರೆ ಅಹಂಕಾರ ಹೆಚ್ಚುವದು. ಆದ ಕಾರಣ ನಿನ್ನ ಹಿತಕ್ಕಾಗಿ ಸುಮ್ಮನಿರುವೆನು. ಆದರೆ ಈ ಮನುಷ್ಯನಿಗೆ ಗಂಡ ಸ್ಥಳ ಇಂಗ್ಲೀಷಿನಲ್ಲಿ 'ಚೀಕ್' ಅಂತಾರಲ್ಲಾ ಅದು ವಿಶಾಲವಾಗಿದೆ ಎಂದು ಕಾಣಿಸುತ್ತೆ.

ಊರ್ಮಿಯ ಮನಸಿನೊಳಗಿಂದ ದೊಡ್ಡದೊಂದು ಹೊರೆ ಇಳಿಯಿತು. ಬಹುದಿನಗಳಿಂದ ಇದ್ದ ಹೊರೆ. ಬಿಡುಗಡೆಯ ಆನಂದದಿಂದ ಏನು ಮಾಡ ಬೇಕೆಂಬುದೇ ಅವಳಿಗೆ ಹೊಳೆಯಲಿಲ್ಲ ಅವಳ ಆ ಕಾರ್ಯಕ್ರಮದ ಪಟ್ಟಿ ಯನ್ನು ಚೂರು ಚೂರಾಗಿ ಹರಿದೆಸೆದಳು. ಓಣಿಯಲ್ಲಿ ಬಿಕ್ಷುಕನೊಬ್ಬನು ನಿಂತು ಭಿಕ್ಷೆ ಬೇಡುತ್ತಿದ್ದನು. ಕಿಟಕಿಯಿಂದ ಉಂಗುರವನ್ನು ಅವನ ಕಡೆಗೆ ಎಸೆದಳು.

ಪೆನ್‌ಸಿಲ್‌ನ ಗುರುತಿನಿಂದ ಅಲಂಕೃತವಾಗಿರುವ ಈ ಪುಸ್ತಕಗಳನ್ನು ಯಾವನಾದರೂ * 'ಹಾಕರ್' ಕೊಂಡುಕೊಳ್ಳುವನೇನು" ಎಂದು ಕೇಳಿದಳು.

"ಒಂದು ವೇಳೆ ಕೊಂಡುಕೊಳ್ಳದಿದ್ದರೆ ಅದರ ಫಲಾಫಲವೇನು ಮುಂಚೆ ಅದನ್ನು ಕೇಳೋಣ "

"ಒಂದು ವೇಳೆ ಅದರೊಳಗೆ ಹಳೆಯ ಕಾಲದ ಭೂತ ಮನೆ ಮಾಡಿಕೊಂಡಿದ್ದರೆ ಆಗಾಗ್ಗೆ ಅರ್ಧ ರಾತ್ರಿಯಲ್ಲಿ ಬೆರಳನ್ನು ತೋರಿಸುತ್ತ ನನ್ನ ಹಾಸಿಗೆಯ ಹತ್ತಿರ ಬಂದು ನಿಲ್ಲವುದು.

"ಆ ಶಂಕೆಯೇನಾದರೂ ಹಾಕರ್*ನನ್ನು ನಿರೀಕ್ಷಿಸಬೇಕಾಗಿದ್ದಿಲ್ಲ. ನಾನೇ ಸ್ವತಃ ಕೊಂಡುಕೊಳ್ಳುವೆನು"

"ಕೊಂಡು ಏನು ಮಾಡುವೆ?"

"ಹಿಂದುಶಾಸ್ತ್ರದ ಅನುಸಾರವಾಗಿ ಅಂತ್ಯೇಷ್ಟಿಕ್ರಿಯೆ. ನಿನ್ನ ಮನಸ್ಸಿಗೆ ಏನಾದರೂ ಸಮೃದ್ಧಿಯಾಗುವುದಾದರೆ ಗಯೆಯವರೆಗೆ ಹೋಗಲು ಸಿದ್ಧ.

"ಊಹೂಂ. ಅಷ್ಟೊಂದು ಆಡಂಬರ ಸಹಿಸೆನು."

"ಒಳ್ಳೇದು ನನ್ನ ಲೈಬ್ರೆರಿಯಲ್ಲಿ ‡ 'ಪಿರಮಿಡ್' ಮಾಡಿಸಿ ಅವುಗಳನ್ನು † 'ಮಮ್ಮಿ' ಮಾಡಿ ಅದರಲ್ಲಿಡುವೆ.

"ಆದರೆ ಇಂದು ನೀನು ಕೆಲಸದ ಮೇಲೆ ಹೋಗಲು ಸಾಧ್ಯವಿಲ್ಲ."

"ಇಡೀ ದಿನ?"

"ಇಡೀ ದಿನವೂ. "

"ಏನು ಮಾಡಬೇಕಾಗಿದೆ? "

"ಮೋಟಾರಿನಲ್ಲಿ ಕುಳಿತು ಓಡಿ ಹೋಗೋಣ "

"ಅಕ್ಕನ ಹತ್ತಿರ ರಜ ಕೇಳಿಕೊಂಡು ಬಾ ಮತ್ತೆ "

"ಊಹೂಂ, ಹಿಂತಿರುಗಿ ಬಂದು ಅಕ್ಕನಿಗೆ ಹೇಳುವೆ. ಅವಳು ಬೇಕಾದಷ್ಟು ಗದರಿಸುವಳು. ಆ ಗದರಿಕೆಯನ್ನು ಸಹಿಸುವೆ "

---

* 'ಹಾಕರ್'— ಹಳೆಯ ಶೀಸೆ, ಪೇಪರ್, ಪುಸ್ತಕ ಮುಂತಾದವುಗಳನ್ನು ಬೀದಿಯಲ್ಲಿ ತಿರುಗಾಡಿ ಕೊಂಡು ಮಾರುವವ.

‡ 'ಪಿರಮಿಡ್'— ಸಾವಿರಾರು ವರ್ಷಗಳ ಹಿಂದೆ ಈಜಿಪ್ತ ದೇಶದ ರಾಜರು ಮೃತರಾದ ತಮ್ಮ ಸ್ವಜನರ ಕಳೇಬರವನ್ನು ಕಟ್ಟಿಸಿದ ಎತ್ತರವಾದ ಗೋಪುರದಂತಹ ಕಟ್ಟಡ.

† 'ಮಮ್ಮಿ'— ಹಿಂದಿನಕಾಲದ ಈಜಿಪ್ಟಿನವರು ಮೃತರಾದವರ ಕಳೆಬರಗಳನ್ನು ದೀರ್ಘಕಾಲ ಇರುವಂತೆ ಸಿದ್ಧ ಮಾಡಿಡುತ್ತಿದ್ದರು. ಈ ಕಳೇಬರಗಳಿಗೆ 'ಮಮ್ಮಿ' ಎಂದು ಹೆಸರಾಗಿದೆ.

"ಒಳ್ಳೇದು, ನಾನೂ ನಿಮ್ಮ ಅಕ್ಕನ ಗದರಿಕೆಯನ್ನು ಅರಗಿಸಿಕೊಳ್ಳಲು ಒಪ್ಪುವೆನು. ಟೈರೇನಾದರೂ ಸಿಡಿದರೆ ದುಃಖಿಸೆನು ಘಂಟೆಗೆ ನಲವತ್ತೈದು ಮೈಲಿಯ ವೇಗದಲ್ಲಿ ಇಬ್ಬರು ಮೂವರು ಕಾರಿಗೆ ಸಿಕ್ಕು ನೆಟ್ಟಗೆ ಜೈಲು ಸೇರಿದರೂ ಅಡ್ಡಿಯಿಲ್ಲ. ಆದರೆ ಮೊದಲು ಮೂರು ಸಾರೆ ಆಣೆಯಿಡು. 'ಆ ಮೋಟಾರ್ ಪ್ರಯಾಣ ಮುಗಿಸಿ ನಮ್ಮ ಮನೆಗೇ ನೀನು ಹಿಂತಿರುಗಿ ಬರವೆ ಯೆಂದು ಮಾತು ಕೊಡು "

ಮೋಟಾರ್ ಸಂಚಾರ ತೀರಿಸಿಕೊಂಡು ಇಬ್ಬರೂ ಮನೆಗೆ ಹಿಂತಿರುಗಿದರು. ಆದರೆ ಘಂಟೆಗೆ ನಲವತ್ತೈದು ಮೈಲಿಯ ವೇಗ ರಕ್ತದಿಂದ ಇನ್ನೂ ಇಳಿದಿರಲಿಲ್ಲ. ಪ್ರಪಂಚದ ಎಲ್ಲ ಜವಾಬ್ದಾರಿ, ನಾಚಿಕೆ ಈ ವೇಗದ ಇದಿರಲ್ಲಿ ಮಾಯವಾಗಿತ್ತು.

ಕೆಲವು ದಿನ ಶಶಾಂಕನ ಎಲ್ಲ ಕೆಲಸಗಳು ಪೂರ್ತಿಯ ಪಾಲಾದವು. ಮನಸ್ಸಿನಲ್ಲಿ ಇದು ಸರಿಯಲ್ಲವೆಂದು ಅವನು ಒಲ್ಲ. ಉದ್ಯೋಗದಲ್ಲಿ ಭಾರೀ ನಷ್ಟ ಸಂಭವಿಸುವುದೂ ಅಸಂಭವವಲ್ಲ. ರಾತ್ರಿ ಹಾಸಿಗೆಯಲ್ಲಿ ಮಲಗಿದಾಗ ಸಂಭವಿಸಬಹುದಾದ ಕೇಡಿನ ಯೋಜನೆ, ಮೇಲಿಂದ ಮೇಲೆ ತಲೆಯಲ್ಲಿ ನುಗ್ಗುತ್ತಿತ್ತು. ಆದರೆ ಮರುದಿನ ಮತ್ತೆ ಆ ಸ್ವಾಧಿಕಾರಪ್ರಮತ್ತತೆ, ಮೇಘ ಸಂದೇಶದ ಯಕ್ಷನಂತೆ, ಮದ್ಯವನ್ನು ಒಮ್ಮೆ ಸೇವಿಸಿದರೆ ಅದರ ಪರಿತಾಪವನ್ನು ಅಡಗಿಸಲು ಇನ್ನೂ ಸೇವಿಸಬೇಕಾಗುವುದು.

---

## ಶಶಾಂಕ

ಈ ವಿಧವಾಗಿ ಕೆಲವು ದಿನಗಳು ಕಳೆದವು. ಕಣ್ಣಿಗೆ ಕತ್ತಲೆ ಕವಿಯಿತು. ಮನಸ್ಸು ಅಸ್ಥಿರವಾಯಿತು.

ತನ್ನನ್ನು ಸ್ಪಷ್ಟವಾಗಿ ಅರಿಯಲು ಊರ್ಮಿಗೆ ವಿಳಂಬವಾಯಿತು. ಆದರೆ ಒಂದು ದಿನ ಅಕಸ್ಮಾತ್ತಾಗಿ ಬೆಚ್ಚಿ ಎಚ್ಚತ್ತು ತನ್ನನ್ನು ಅರಿತುಕೊಂಡಳು.

ಮಥುರ್ ಅಣ್ಣನನ್ನು ಕಂಡರೆ ಊರ್ಮಿಗೆ ಏಕೋ ಅಂಜಿಕೆ. ಅವರೆದುರಿಗೆ ಕಾಣಿಸಿಕೊಳ್ಳದೆಯೇ ಇರುವಳು. ಅಂದು ಮಥುರ್ ಅಣ್ಣ ಬೆಳಗ್ಗೆ ಬಂದು

ಅಕ್ಕನ ಕೊಠಡಿಗೆ ಹೋಗಿ ಮೂರನೆಯ ಝಾವದ ವರೆಗೆ ಅಲ್ಲಿಯೇ ಮಾತನಾಡುತ್ತಿದ್ದು ಹೋದರು.

ಆ ಮೇಲೆ ಅಕ್ಕ ಊರ್ಮಿಯನ್ನು ಕರೆಸಿದಳು. ಅವಳ ಮುಖ ಕಠೋರವಾಗಿತ್ತು. ಆದರೆ ಶಾಂತವಾಗಿತ್ತು. ''ಪ್ರತಿನಿತ್ಯ ಅವರ ಕೆಲಸದಲ್ಲಿ ಅಡ್ಡಿ ಮಾಡಿ ಎಂತಹ ಕೆಲಸ ಮಾಡಿರುವೆ ಬಲ್ಲೆಯೋ?'' ಎಂದಳು.

ಊರ್ಮಿ ಹೆದರಿದಳು. ''ಏನಾಯಿತು ಅಕ್ಕ'' ಎಂದಳು. ಅಕ್ಕ ಹೇಳಿದಳು– ''ಮಥುರ್ ಅಣ್ಣ ಹೇಳಿ ಹೋದರು ಕೆಲವು ದಿನಗಳಿಂದ ನಿನ್ನ ಅಕ್ಕನ ಗಂಡ ಸ್ವಂತವಾಗಿ ಏನೇನೂ ಕೆಲಸ ನೋಡುತ್ತಿಲ್ಲ. ಜವಾಹರ್ ಲಾಲನ ಮೇಲೆ ಎಲ್ಲ ಹೊಣೆಯನ್ನು ಹೇರಿದ್ದರು. ಅವನು ಸಾಮಾನು ಸರಂಜಾಮಿನಲ್ಲಿ ಎರಡೂ ಕೈಗಳಿಂದ ಕದ್ದು ಗೋರಿಕೊಂಡನು. ಕಟ್ಟಿಸಿದ ದೊಡ್ಡ ದೊಡ್ಡ ಗಡಂಗುಗಳ ತಾರಸಿಗಳು ಸಂಪೂರ್ಣವಾಗಿ ಒಂದರಿಯಂತಾಗಿವೆ. ಆವತ್ತಿನ ದೊಡ್ಡ ಮಳೆಯಲ್ಲಿ ಎಲ್ಲಾ ಪತ್ತೆಯಾಯಿತು. ಸಾಮಾನೆಲ್ಲ ನಷ್ಟವಾಗುತ್ತಿದೆ ನಮ್ಮ ಕಂಪೆನಿ ಹೆಸರುವಾಸಿಯಾದುದು ಆದ್ದರಿಂದಲೇ ಅವರುಗಳು ಮೊದಲು ಪರೀಕ್ಷಿಸಲಿಲ್ಲ. ಈಗ ಬೇಕಾದಷ್ಟು ಕೆಟ್ಟ ಹೆಸರು ಮತ್ತು ನಷ್ಟ ಸಹಿಸಬೇಕಾಗಿದೆ. ಮಥುರ್ ಅಣ್ಣ ಪಾಲುಗಾರಿಕೆ ಬಿಡಲಿರುವರು''

ಊರ್ಮಿಯ ಎದೆ ದಡಗುಟ್ಟಿತು. ಮುಖ ಕಂಗೆಟ್ಟಿತು. ಕ್ಷಣಮಾತ್ರದಲ್ಲಿ ಮಿಂಚಿನ ಹೊಳಪಿನಲ್ಲಿ ತನ್ನ ಗುಪ್ತ ರಹಸ್ಯವನ್ನು ಅರಿತಳು. ಯಾವ ವೇಳೆಯಲ್ಲಿ ಅವಳ ಅರಿವಿಲ್ಲದೆ ಮನದ ಅಂತರ್ಯದ ಹದ ತಪ್ಪಿತೆಂಬುದನ್ನೂ ತಾನು ಒಳ್ಳೆಯದು ಕೆಟ್ಟದು ಯಾವುದನ್ನೂ ಯೋಚಿಸಲಾರದೆ ಹೋದುದು ಯಾವಾಗ ಎಂಬುದನ್ನು ಸ್ಪಷ್ಟವಾಗಿ ಅರಿತಳು. ಶಶಾಂಕನ ಉದ್ಯೋಗವೇ ಅವಳ ಪ್ರತಿಸ್ಪರ್ಧಿಯಾಗಿತ್ತೋ. ಅದರೊಡನೆಯೇ ಅವಳ ದ್ವಂದದ ಯುದ್ಧವೋ. ಉದ್ಯೋಗದಿಂದ ಅವನನ್ನು ಬಿಡಿಸಿ ಸರ್ವದಾ ಸಂಪೂರ್ಣವಾಗಿ ಸಮೀಪದಲ್ಲೇ ಇರಿಸಿಕೊಳ್ಳಲು ಊರ್ಮಿಯು ಒಳಗೊಳಗೆ ಚಟಪಟಿಸುತ್ತಿದ್ದಳು. ಶಶಾಂಕನು ಸ್ನಾನ ಮಾಡುತ್ತಿರುವನು. ಯಾರಾದರೂ ಉದ್ಯೋಗದ ವಿಷಯವಾಗಿ ಮಾತನಾಡಲು ಬರುವರು. ಊರ್ಮಿ ಹಿಂದು ಮುಂದು ಆಲೋಚಿಸದೆ ''ಹೇಳಿ ಬಿಡು. ಈಗ ನೋಡಲು ಸಾಧ್ಯವಿಲ್ಲ'' ಎಂದು ಹೇಳಿ ಕಳುಹಿಸಿಬಿಡುವಳು. ಇಂತಹ ಘಟನೆಗಳು ಎಷ್ಟೋ ಸಾರಿ ಘಟಿಸಿವೆ.

ಸ್ನಾನ ಮಾಡಿ ಬಂದು ಅವರನ್ನು ಕಂಡರೆ ಶಶಾಂಕನಿಗೆ ಮತ್ತೆ ವಿರಾಮ ಸಿಕ್ಕದೆಂಬ ಅಂಜಿಕೆ. ಅನಂತರ ಅವನು ಕೆಲಸದಲ್ಲಿ ಸಂಪೂರ್ಣವಾಗಿ ಮುಳುಗಿಬಿಟ್ಟರೆ ಊರ್ಮಿಗೆ ಹಗಲೆಲ್ಲಾ ವ್ಯರ್ಥ. ಅವಳ ಅತಿ ಕೆಟ್ಟ ಅವು ಲಿನ ಸಂಕ್ರಾಮಿಕತೆಯ ಚಿತ್ರ ಸಂಪೂರ್ಣವಾಗಿ ಅವಳ ಕಣ್ಣೆದಿರಿನಲ್ಲಿ ಕಾಣಿ ಸಿತು. ತಕ್ಷಣ ಅಕ್ಕನ ಕಾಲಿನ ಬಳಿ ಬೋರಲಾಗಿ ಬಿದ್ದಳು. ಬಾರಿ ಬಾರಿಗೆ ಬಿಗಿದ ಕಂಠದಿಂದ ಹೇಳತೊಡಗಿದಳು– "ಓಡಿಸಿ ಬಿಡು ಅಕ್ಕ– ನಿಮ್ಮ ಮನೆ ಯಿಂದ ನನ್ನನ್ನು ಹೊರಡಿಸಿ ಬಿಡು. ಈಗಲೇ ದೂರ ತೊಲಗಿಸು."

ಅಕ್ಕ ಇಂದು ನಿಶ್ಚಿಂತತೆಯಿಂದ ಯಾವ ವಿಧದಲ್ಲೂ ಊರ್ಮಿಯನ್ನು ಕ್ಷಮಿಸುವುದಿಲ್ಲವೆಂದು ನಿರ್ಧರಿಸಿ ಕುಳಿತಿದ್ದಳು. ಮನಸ್ಸು ಕರಗಿತು.

ಮೆಲ್ಲಮೆಲ್ಲನೆ ಊರ್ಮಿಮಾಲೆಯ ತಲೆ ಸವರುತ್ತ " ಏನೂ ಯೋಚಿಸ ಬೇಡ. ಏನೇ ಆಗಲಿ, ಏನಾದರೊಂದು ದಾರಿ ಇದ್ದೇ ಇದೆ" ಎಂದಳು.

ಊರ್ಮಿ ಎದ್ದು ಕುಳಿತಳು. "ಅಕ್ಕ, ನಿಮ್ಮಗಳದೇ ಏಕೆ ನಷ್ಟವಾಗ ಬೇಕು? ನನ್ನದೂ ಹಣ ಇದೆಯಲ್ಲ" ಎಂದಳು.

ಶರ್ಮಿಳೆ ಹೇಳತೊಡಗಿದಳು– "ಹುಚ್ಚಿಯಾದೆಯೇನು? ನನಗೆ ಏನೇನೂ ಇಲ್ಲವೇನು? ಮಥುರಣ್ಣನಿಗೆ ಹೇಳಿದ್ದೇನೆ. ಈ ವಿಷಯವಾಗಿ ಅವರು ಏನೂ ಗಲಾಟೆ ಮಾಡದಿರಲೆಂದು ಬೇಡಿರುವೆನು. ನಷ್ಟವನ್ನೆಲ್ಲಾ ನಾನು ಕಟ್ಟಿಕೊಡುವೆನು. ಇನ್ನೂ ನಿನಗೂ ಹೇಳಿದೇನೆ. ನನಗೆ ಈ ವಿಷಯ ತಿಳಿ ದಿದೆಯೆಂದು ನೀನು ನಿನ್ನ ಅಕ್ಕನ ಗಂಡನ ಹತ್ತಿರ ಖಂಡಿತವಾಗಿ ಬಾಯ್ಬಿ ಬಿಡಕೂಡದು."

"ಕ್ಷಮಿಸು ಅಕ್ಕ. ನನ್ನನ್ನು ಕ್ಷಮಿಸು." ಹೀಗೆ ಹೇಳಿ ಊರ್ಮಿ ಮತ್ತೆ ಅಕ್ಕನ ಕಾಲ ಮೇಲೆ ಬಿದ್ದು ತಲೆ ಚಚ್ಚಿಕೊಳ್ಳತೊಡಗಿದಳು.

ಶರ್ಮಿಳೆ ಕಣ್ಣೀರನ್ನು ಒರಸಿಕೊಂಡು ದಣಿದ ಕಂಠದಲ್ಲಿ "ಯಾರು ಯಾರನ್ನು ಕ್ಷಮಿಸುವುದು ತಂಗೀ? ಬಾಳುವೆ ಅತಿ ಜಟಿಲವಾದುದು, ಏನನ್ನು ಆಲೋಚಿಸುವೆವೋ ಅದು ನಡೆಯದು. ಯಾವುದಕ್ಕಾಗಿ ಜೀವಾವಧಿ ಯತ್ನಿ ಸುವೆವೋ ಅದು ಕೈತಪ್ಪುವುದು."

ಅಕ್ಕನನ್ನು ಬಿಟ್ಟು ಊರ್ಮಿ ಕ್ಷಣಕಾಲವೂ ಅಲುಗಲು ಇಷ್ಟಪಡಳು. ಔಷಧ ಕೊಡುವುದು, ಸ್ನಾನ ಮಾಡಿಸುವುದು, ಊಟ ಮಾಡಿಸುವುದು, ಹಾಸಿಗೆ ಹಾಸಿ

ಮಲಗಿಸುವುದು ಎಲ್ಲ ಸಣ್ಣ ದೊಡ್ಡ ಕೆಲಸಗಳನ್ನೂ ಸ್ವತಃ ಮಾಡುವಳು. ಮತ್ತೆ ಪುಸ್ತಕ ಓದಲು ಆರಂಭಿಸಿದಳು. ಅದೂ ಅಕ್ಕನ ಹಾಸಿಗೆಯ ಪಕ್ಕದಲ್ಲಿ ಕುಳಿತೇ. ತನ್ನನ್ನೂ ನಂಬಳು. ಶಶಾಂಕನನ್ನೂ ನಂಬಳು.

ಇದರ ಫಲವೇನಾಯಿತೆಂದರೆ ಶಶಾಂಕನು ಅಡಿಗಡಿಗೆ ರೋಗಿಣಿಯ ಕೊಠಡಿಗೆ ಬರುವನು. ಗಂಡಸಾದವನ ಕುರುಡುತನದಿಂದಲೇ ತನ್ನ ಈ ಚಂಚಲತೆಯ ಕಾರಣ ಹೆಂಡತಿ ಅರಿತಿರುವಳು. ಊರ್ಮಿ ನಾಚಿಕೆಯಿಂದ ಸಾಯುತ್ತಿರುವಳು. ಎಂಬುದನ್ನು ಶಶಾಂಕನು ತಿಳಿದುಕೊಳ್ಳನು. ಮೋಹನ್ ಬಗಾನ್‌ನವರ ಕಾಲ್ಚೆಂಡಿನ ಪಂಥದ ಸುದ್ದಿ ಎತ್ತಿಕೊಂಡು ಶಶಾಂಕ ಬರುವನು. ಪ್ರಯೋಜನವಾಗದೆ ಹಿಂದಿರುಗುವನು. ಪೆನ್ಸಿಲಿನಿಂದ ಗುರುತು ಮಾಡಿ ದಿನಪತ್ರಿಕೆಯಲ್ಲಿನ ಚಾರ್ಲಿಚಾಪ್ಲಿನ್ನನ ಸಿನಿಮಾದ ಆಶೆ ತೋರುವನು. ಏನೂ ಪ್ರಯೋಜನವಾಗಲಿಲ್ಲ. ಊರ್ಮಿ ದುರ್ಲಭಳಾಗಿರಲಿಲ್ಲವಲ್ಲ. ಆಗಲೂ ಹಲವಾರು ಅಡ್ಡಿ ಆತಂಕಗಳ ನಡುವೆಯೂ ಶಶಾಂಕ ಉದ್ಯೋಗದ ವಿಷಯವಾಗಿ ಯೋಚಿಸದೆ ಇರುತ್ತಿರಲಿಲ್ಲ. ಈಗ ಅದು ಅಸಾಧ್ಯವಾಯಿತು.

ನಿರ್ಭಾಗ್ಯನ ಈ ಸಂಕಟದಿಂದ ಅತಿ ದುಃಖಕಾಲದಲ್ಲೂ ಶರ್ಮಿಳೆಗೆ ಸಂತೋಷವಾಗುತ್ತಿತ್ತು. ಆದರೆ ಕ್ರಮೇಣ ಅವನ ಸಂಕಟ ಪ್ರಬಲವಾಗುತ್ತಿರುವುದನ್ನೂ, ಮುಖ ಒಣಗುತ್ತಿರುವದನ್ನೂ, ಕಣ್ಣಿನ ಕೆಳಗೆ ಸುಕ್ಕಿನ ಗೆರೆಗಳು ಬರತೊಡಗಿದ್ದನ್ನೂ ಕಂಡಳು. ಊಟ ಮಾಡುವಾಗ ಊರ್ಮಿ ಹತ್ತಿರ ಕೂರಳು. ಅದರ ಪರಿಣಾಮವಾಗಿ ಶಶಾಂಕನಿಗೆ ಊಟದಲ್ಲಿ ಉತ್ಸಾಹವಿರದು. ಊಟದ ಆಳತೆಯೂ ಕಡಿಮೆಯಾಗುತ್ತಿದೆಯೆಂಬುದನ್ನು ಅವನನ್ನು ನೋಡಿದರೇ ತಿಳಿಯುತ್ತಿತ್ತು. ಇತ್ತೀಚೆಗೆ ಈ ಮನೆಯಲ್ಲಿ ಆನಂದದ ಪ್ರವಾಹ ಹರಿಯತೊಡಗಿತ್ತಲ್ಲ ಅದು ಸಂಪೂರ್ಣವಾಗಿ ಬತ್ತಿ ಹೋಗಿತ್ತು. ಆದರೂ ಹಿಂದೆ ಅವರ ಸಂಸಾರ ಸಹಜರೀತಿಯಲ್ಲಿ ನಡೆಯುತ್ತಿತ್ತಲ್ಲ, ಅದೂ ಇರಲಿಲ್ಲ.

ಒಂದಾನೊಂದು ಕಾಲದಲ್ಲಿ ಶಶಾಂಕನು ತನ್ನ ಚಹರೆಯ ಅಂದ ಚಂದದ ವಿಷಯವಾಗಿ ಅಲಕ್ಷ್ಯದಿಂದಿರುತ್ತಿದ್ದನು. ನಾಪಿಕನು ಕೂದಲು ಕತ್ತರಿಸುವಾಗ ತಲೆ ಸಂಪೂರ್ಣವಾಗಿ ಬೋಳಾಗುವಂತೆ ಕತ್ತರಿಸಹೇಳುತ್ತಿದ್ದನು. ಬಾಚಿಕೊಳ್ಳುವದರ ಪ್ರಯೋಜನ ಹದಿನಾರಾಣೆಯಲ್ಲಿ ಒಂದಂಶದಷ್ಟೇ ಮನಸ್ಸಿಗೆ ತೋರುತ್ತಿತ್ತು. ಶರ್ಮಿಳೆ ಈ ಮಾತನ್ನೆತ್ತಿಕೊಂಡು ಬೇಕಾದಷ್ಟು ಚರ್ಚಿಸಿ ಸೋತು ತೆಪ್ಪಗಾಗಿದ್ದಳು. ಆದರ ಈಚೆಗೆ ಊರ್ಮಿಯ ಉಚ್ಚ

ಹಾಸ್ಯದೊಡನೆ ಕೂಡಿದ ಸಂಕ್ಷೇಪವಾದ ತೊಂದರೆ ನಿಷ್ಫಲವಾಗಲಿಲ್ಲ. ಹೊಸ ರೀತಿಯ ಕೂದಲ ಬೆಳೆಯೊಡನೆ ಸುಗಂಧ ತೈಲದ ಸಂಯೋಗ ಶಶಾಂಕನ ತಲೆಯಲ್ಲಿ ಈಗ ಮೊಟ್ಟ ಮೊದಲು ಘಟಿಸಿತ್ತು. ಆದರೆ ಅನಂತರ ಈಚೆಗೆ ತಲೆಗೂದಲ ಸ್ಥಿತಿಯಿಂದ ಅವನ ಸಂಕಟ ಚೆನ್ನಾಗಿ ಗೊತ್ತಾಗುತ್ತಿತ್ತು. ಈ ಸಂಗತಿ ಎಲ್ಲಿಗೆ ಮುಟ್ಟಿತೆಂದರೆ ಈಗ ತಲೆಗೂದಲ ವಿಷಯವಾಗಿ ಪ್ರತ್ಯಕ್ಷವಾಗಿಯಾಗಲಿ ಪರೋಕ್ಷವಾಗಿಯಾಗಲಿ ಹಾಸ್ಯ ಅವನಿಗೆ ಅಸಹನೀಯ ವಾಗಿತ್ತು. ಶರ್ಮಿಳೆಯ ಉತ್ಕಂಠತೆ ಅವಳ ಕೋಪವನ್ನು ಸೋಲಿಸಿ ಮುಂದುವರಿಯಿತು. ಗಂಡನ ವಿಷಯದಲ್ಲಿ ಕರುಣೆ, ತನ್ನ ವಿಷಯದಲ್ಲಿ ಧಿಕ್ಕಾರ, ಅವಳ ಹೃದಯದ ನಡುವೆ ಕಿತ್ತಾಡತೊಡಗಿದವು. ರೋಗದ ನೋವನ್ನು ಕೆರಳಿಸಿತು.

ಮೈದಾನ ಕೋಟೆಯ ಸೈನಿಕರ ನಕಲೀಯುದ್ಧದ ಪ್ರದರ್ಶನ. ಶಶಾಂಕನು ಅಂಜುತ್ತ ಅಂಜುತ್ತ ಬಂದು "ನೋಡಲು ಹೋಗೋಣವೇ ಊರ್ಮಿ? ಪ್ರಶಸ್ತವಾದ ಸ್ಥಳ ಕಾದಿರಿಸಿದ್ದೇನೆ" ಎಂದನು.

ಊರ್ಮಿ ಯಾವುದೊಂದು ಉತ್ತರ ಹೇಳುವ ಮುಂಚೆಯೇ ಶರ್ಮಿಳೆ ಹೇಳಿದಳು, "ಹೋಗದೆ ಏನು, ಖಂಡಿತ ಹೋಗುವಳು. ಸ್ವಲ್ಪ ಹೊರಗೆ ತಿರುಗಾಡಿಕೊಂಡು ಬರಲು ಅವಳು ಎಷ್ಟು ಹಾತೊರೆಯುತ್ತಿರುವಳು."

ಬೆಂಬಲ ಸಿಕ್ಕಲು ಎರಡು ದಿನಗಳೊಳಗೆ 'ಸರ್ಕಸ್ಸಿಗೆ?' ಎಂದನು.

ಈ ಪ್ರಸ್ತಾಪಕ್ಕೆ ಊರ್ಮಿಮಾಲೆಯಲ್ಲಿ ಉತ್ಸಾಹವೇ ಕಾಣಿಸಿತು.

ಅನಂತರ "ಬೊಟಾನಿಕಲ್ ಗಾರ್ಡನ್?"

ಇದಕ್ಕೆ ಸ್ವಲ್ಪ ಅಡ್ಡಿ ಒದಗಿತು. ಅಕ್ಕನನ್ನು ಬಿಟ್ಟು ಹೆಚ್ಚು ಕಾಲ ದೂರದಲ್ಲಿರಲು ಊರ್ಮಿಯ ಮನಸ್ಸು ಸಮ್ಮತಿಸದು.

ಅಕ್ಕನೇ ಸ್ವತಃ ಶಶಾಂಕನ ಪಕ್ಷ ವಹಿಸಿದಳು. ಸೀಮೆ ರಾಜ್ಯದ ಗಾರೆಯವರು, ಕಾಮಾಟಿಗಳೊಡನೆ ಹಗಲೆಲ್ಲಾ ಸುತ್ತಿ ಸುತ್ತಿ ದುಡಿದು ದುಡಿದು ದಣಿಯುತ್ತಿರುವನು. ಇಡೀ ದಿನ ಮಣ್ಣು ಮರಳಿನ ನಡುವೆ ದುಡಿಯುತ್ತಿರುವನು. ಸ್ವಲ್ಪ ಗಾಳಿ ಸೇವಿಸದಿದ್ದರೆ ಆರೋಗ್ಯ ಕೆಟ್ಟು ಹೋಗುವದು ಖಂಡಿತ" ಎಂದಳು.

ಈ ಒಂದು ಯುಕ್ತಿಯನ್ನು ಅನುಸರಿಸಿ ಸ್ಟೀಮರಿನಲ್ಲಿ ರಾಜಗಂಜನವರೆಗೆ ಹೋಗಿ ಬರುವುದು ಅಸಂಗತವೆನಿಸಲಿಲ್ಲ.

ಶಶಾಂಕನಿಗೆ ಸ್ಪಷ್ಟವಾಗಿ ಯಾರೂ ಏನೂ ಹೇಳಿರಲಿಲ್ಲ. ನಿಜ, ಆದರೆ ನಾಲ್ಕು ದಿಕ್ಕಿನಿಂದಲೂ ಅವನು ಒಂದು ಅವ್ಯಕ್ತವಾದ ಬೆಂಬಲ ಹೊಂದುತ್ತಿದ್ದನು. ಶಶಾಂಕನು "ಶರ್ಮಿಳೆಯ ಮನಸ್ಸಿನಲ್ಲಿ ಯಾವ ವಿಧವಾದ ವ್ಯಥೆಯೂ ಇಲ್ಲ. ಇವರಿಬ್ಬರೂ ಒಂದೆಡೆ ಕಲೆತು ಆನಂದಿಸುವುದು ನೋಡಿಯೇ ಅವಳಿಗೆ ಸಂತೋಷ" ಎಂದು ಒಂದು ರೀತಿಯಲ್ಲಿ ತೀರ್ಮಾನಿಸಿಕೊಂಡಿದ್ದನು. ಸಾಮಾನ್ಯ ಸ್ತ್ರೀಯರ ವಿಷಯವಾದರೆ ಇದು ನಡೆಯಲು ಸಾಧ್ಯವಿರದು. ಆದರೆ ಶರ್ಮಿಳೆ ಅಸಾಧಾರಣಳು. ಶಶಾಂಕನು ಚಾಕರಿಯಲ್ಲಿದ್ದ ಕಾಲದಲ್ಲಿ ಕಲಾವಿದನೊಬ್ಬನು ಬಣ್ಣದ ಪೆನ್‌ಸಿಲಿನಿಂದ ಶರ್ಮಿಳೆಯ ಚಿತ್ರವೊಂದನ್ನು ರಚಿಸಿದ್ದನು. ಇದುವರೆಗೆ ಅದು ಒಂದು ರಟ್ಟಿನ ನಡುವೆ ಅಡಗಿತ್ತು. ಅದನ್ನು ಹೊರಗೆ ತೆಗೆದು ವಿಲಾಯತಿಯ ಚೌಕಟ್ಟಿನ ಅಂಗಡಿಯಲ್ಲಿ ಕೊಟ್ಟು ಬಹು ಬೆಲೆಯ ಅಂದವಾದ ಕಟ್ಟು ಹಾಕಿಸಿ ತಂದು ಆಫೀಸು ರೂಮಿನಲ್ಲಿ ತಾನು ಕೂರುತ್ತಿದ್ದ ಸ್ಥಳಕ್ಕೆ ಇದಿರಿನಲ್ಲಿ ಸರಿಯಾಗಿ ಗೋಡೆಗೆ ನೇತು ಹಾಕಿದ್ದನು. ಇದಿರಿನಲ್ಲಿದ್ದ ಫೂಲ್‌ದಾನಿಯಲ್ಲಿ ಪ್ರತಿನಿತ್ಯ ಮಾಲಿಯು ಹೂವುಗಳನ್ನು ತಂದಿಡುತ್ತಿದ್ದನು.

ಕೊನೆಗೆ ಒಂದುದಿನ ಶಶಾಂಕ ತೋಟದಲ್ಲಿ ಸೂರ್ಯಮುಖಿ ಹೇಗೆ ಅರಳಿದೆಯೆಂದು ನೋಡುತ್ತ ನೋಡುತ್ತ ಹಠಾತ್ತಾಗಿ ಊರ್ಮಿಯ ಕೈಯನ್ನು ಅದುಮಿ ಹಿಡಿದುಕೊಂಡು "ನೀನು ಖಂಡಿತ ಬಲ್ಲೆ. ನಿನ್ನನ್ನು ನಾನು ಪ್ರೀತಿಸುವೆನು. ಮತ್ತೆ ನಿಮ್ಮ ಅಕ್ಕ, ಅವಳಂತೂ ದೇವಿ. ಅವಳಲ್ಲಿ ಎಷ್ಟು ಭಕ್ತಿ ಇಟ್ಟಿರುವೆನೋ ಮತ್ತಾರಲ್ಲೂ ಹಾಗೆ ಇಟ್ಟಿಲ್ಲ. ಅವಳು ಪೃಥ್ವಿಯ ಮಾನವಿಯಲ್ಲ, ಅವಳು ನಮಗಿಂತ ಎಷ್ಟೋ ಮೇಲಿನವಳು."

'ತಾನು ಹೊರಟು ಹೋದ ಮೇಲೆ ಎಲ್ಲಕ್ಕೂ ಹೆಚ್ಚಿನ ಸಮಾಧಾನದ ಸಂಗತಿ ಊರ್ಮಿಯೊಡನೆ ಬಾರಿಬಾರಿಗೆ ಹೇಳಿದ್ದಳು. ಈ ಸಂಸಾರದಲ್ಲಿ ಮತ್ತಾವ ಹೆಂಗಸಾದರೂ ಬಂದು ನೆಲಸುವಳೆಂಬುದನ್ನು ನೆನೆಯಲೂ ಅಕ್ಕನಿಗೆ ಸಂಕಟ. ಆದರೆ ಶಶಾಂಕನನ್ನು ಪೋಷಿಸಲು ಯಾವ ಹೆಂಗಸೂ ಇಲ್ಲದಿರುವಂತಹ ಅದೃಷ್ಟಹೀನ ಪರಿಸ್ಥಿತಿಯನ್ನು ನೆನಸುವುದೂ ಅವಳಿಗೆ ಸಂಕಟಕರವಾಗಿತ್ತು. ಉದ್ಯೋಗದ ವಿಷಯದಲ್ಲೂ ಅಕ್ಕನು ಊರ್ಮಿಗೆ ತಿಳಿವಳಿಕೆ ಕೊಟ್ಟಿದ್ದಳು. ಪ್ರೇಮದಲ್ಲಿ ಅಡ್ಡಿ ಒದಗಿದರೆ ಆ ಅಡಚಣೆಯ ಪೆಟ್ಟಿನಿಂದ ಅವರ ಕೆಲಸ ಕಾರ್ಯಗಳೆಲ್ಲಾ ಹಾಳಾಗುವವು. ಅವಳ ಮನಸು

ಯಾವಾಗ ತೃಪ್ತಗೊಳ್ಳುವುದು ಆಗಲೇ ಪುನಃ ಕೆಲಸಕಾರ್ಯದ ವಿಷಯ ತಾನಾಗಿ ದಾರಿಗೆ ಬರುವುದು ಎಂದಿದ್ದಳು.

ಶಶಾಂಕನ ಮನಸ್ಸು ಉತ್ಸಾಹಗೊಳ್ಳತೊಡಗಿತು. ಅವನು ಸಂಸಾರದ ಎಲ್ಲ ಹೊಣೆಯನ್ನೂ ಸುಖದ ಸ್ವಪ್ನದಲ್ಲಿ ಮರೆಯಿಸುತ್ತಿದ್ದ ಒಂದು ಕನಸಿನ ರಾಜ್ಯದಲ್ಲಿರುತ್ತಿದ್ದನು. ಇತ್ತೀಚೆಗೆ ಭಾನುವಾರವನ್ನು ಆಚರಿಸುವುದರಲ್ಲಿ ಹದಿನಾರಾಣೆ ಕ್ರೈಸ್ತರಂತೆಯೇ ಅವನ ನಿಷ್ಠೆ. ಒಂದು ದಿನ ಹೋಗಿ ಶರ್ಮಿಳೆಗೆ ಹೇಳಿದನು-- "ನೋಡು, ಸೆಣಬಿನ ಕಾರ್ಖಾನೆಯ ಸಾಹೇಬರ ಹತ್ತಿರದಿಂದ ಅವರ ಸ್ಟೀಮ್‌ಲಾಂಚ್ ಸಿಕ್ಕಿದೆ. ನಾಳೆ ಭಾನುವಾರ ಮುಂಜಾನೆಯೇ ಊರ್ಮಿಯನ್ನು ಕರೆದುಕೊಂಡು ಡೈಮಂಡ್ ಹಾರ್ಬರ್‌ವರೆಗೆ ಹೋಗೋಣವೆಂದು ಯೋಚಿಸಿರುವೆನು. ಸಂಜೆಗೆ ಮುಂಚೆ ಹಿಂದಿರುಗುವೆ."

ಶರ್ಮಿಳೆಯ ನಳಗಳನ್ನು ಯಾರೋ ನುಲುಚಿದಂತಾಯಿತು. ವೇದನೆಯಿಂದ ಹಣೆಯ ಚರ್ಮದಲ್ಲಿ ಸುಕ್ಕು ಕಾಣಿಸಿತು. ಶಶಾಂಕನ ದೃಷ್ಟಿಗೆ ಗೋಚರಿಸಲೇ ಇಲ್ಲ. 'ಊಟದ ಸಮಾಚಾರವೇನು?' ಎಂದು ಶರ್ಮಿಳೆ ಒಮ್ಮೆ ವಿಚಾರಿಸಿದಳು ಅಷ್ಟೇ. ''ಹೋಟೆಲಿನವರೊಡನೆ ಏರ್ಪಾಡು ಮಾಡಿರುವೆನು'' ಎಂದು ಶಶಾಂಕನು ಹೇಳಿದನು.

ಒಂದಾನೊಂದು ಕಾಲದಲ್ಲಿ ಇವೆಲ್ಲ ಏರ್ಪಾಡುಗಳನ್ನು ಮಾಡುವ ಭಾರ ಶರ್ಮಿಳೆಯ ಪಾಲಾಗಿತ್ತಲ್ಲ ಆಗ ಶಶಾಂಕ ಉದಾಸೀನನಾಗಿದ್ದ. ಈಗ ಎಲ್ಲ ತಿರುವು ಮುರುವಾಗಿದೆ.

'ಒಳ್ಳೇದು ಹೋಗಿ ಬನ್ನಿ' ಎಂದು ಶರ್ಮಿಳೆ ಹೇಳಿದಳೋ ಇಲ್ಲವೋ ಕ್ಷಣಮಾತ್ರವೂ ವಿಳಂಬ ಮಾಡದೆ ಶಶಾಂಕನು ಹೊರಬಿದ್ದನು. ಶರ್ಮಿಳೆಗೆ ಗಟ್ಟಿಯಾಗಿ ಅಳಬೇಕೆಂದೆನಿಸಿತು. ದಿಂಬಿನ ಮಧ್ಯೆ ಮುಖವನ್ನು ಅದುಮಿಕೊಂಡು "ಇನ್ನೂ ಬದುಕಿರುವೆನೇಕೆ?" ಎಂದು ಹೇಳತೊಡಗಿದಳು.

ಮರುದಿನದ ಭಾನುವಾರ ಅವರ ಮದುವೆಯ ವಾರ್ಷಿಕೋತ್ಸವದ ದಿನ. ಇದುವರೆಗೆ ಈ ದಿನವನ್ನು ಆಚರಿಸುವುದರಲ್ಲಿ ಎಂದೂ ಲೋಪವಾಗಿರಲಿಲ್ಲ. ಈ ಸಾರಿಯೂ ಗಂಡನಿಗೆ ಹೇಳದೆಯೇ ಹಾಸಿಗೆಯಲ್ಲಿ ಮಲಗಿಯೇ ಎಲ್ಲ ಏರ್ಪಾಡನ್ನೂ ಮಾಡಿದ್ದಳು. ಹೆಚ್ಚೇನೂ ಇಲ್ಲ. ಮದುವೆಯ ದಿನ ಶಶಾಂಕನು ಕೆಂಪು ಬಣ್ಣದ ಕಾಶೀಪೀತಾಂಬರ ಉಟ್ಟಿದ್ದನಲ್ಲ, ಅದನ್ನು ಅವನಿಗೆ ಉಡಿಸುವುದು. ತಾನು ಸಂಕಲಿಕೆಯ ಸೀರೆ ಉಡುವುದು. ಗಂಡನ

ಕೊರಳಲ್ಲಿ ಮಾಲೆ ಹಾಕಿ ಅವನನ್ನು ಇದಿರಿನಲ್ಲಿ ಕೂರಿಸಿ ಊಟ ಮಾಡಿಸು ವುದು. ಧೂಪದ ಬತ್ತಿ ಹಚ್ಚುವುದು. ಪಕ್ಕದ ಕೊಠಡಿಯಲ್ಲಿ ಗ್ರಾಮಫೋನಿನಲ್ಲಿ ಸನಾಯಿ ವಾದ್ಯ ಬಾರಿಸುತ್ತಿರುವುದು- ಇತರ ವರ್ಷಗಳಲ್ಲಿ ಶಶಾಂಕನು ಅವ ಳಿಗೆ ಮುಂಚೆ ತಿಳಿಸದೆಯೇ ಅವಳಿಗಿಷ್ಟವಾದ ಯಾವುದಾದರೊಂದು ಪದಾರ್ಥವನ್ನು ಕೊಂಡು ತಂದು ಉಪಹಾರ ಕೊಡುವನು. ಈ ಸಾರೆಯೂ ಖಂಡಿತ ತಂದು ಕೊಡುವನು. ನಾಳೆ ಆ ವಿಷಯ ತಿಳಿಯುವುದು ಎಂದು ಶರ್ಮಿಳೆ ಭಾವಿಸಿದ್ದಳು.

ಇಂದು ಮತ್ತೇನನ್ನು ಸಹಿಸಲು ಅವಳಿಂದಾಗದು. ಕೊಠಡಿಯಲ್ಲಿ ಯಾರೂ ಇಲ್ಲದಿರುವಾಗ ಸುಮ್ಮನೆ, "ಎಲ್ಲ ಮಿಥ್ಯೆ, ಮಿಥ್ಯೆ. ಮಿಥ್ಯೆ. ಈ ಆಟದಿಂದ ಆಗುವುದೇನು?" ಎಂದನ್ನುವಳು

ರಾತ್ರಿ ನಿದ್ರೆ ಬರಲಿಲ್ಲ. ಮುಂಜಾನೆ ಮೋಟಾರು ಬಾಗಿಲ ಹತ್ತಿರದಿಂದ ಹೋದ ಸದ್ದು ಕೇಳಿಸಿತು. ಶರ್ಮಿಳೆಯು ಬಿಕ್ಕಿ ಬಿಕ್ಕಿ ಅಳುತ್ತ 'ದೇವರೇ– ನೀನು ಮಿಥ್ಯೆ' ಎಂದಳು.

ರೋಗ ವೇಗವಾಗಿ ಹೆಚ್ಚತೊಡಗಿತು. ದುರ್ಲಕ್ಷಣ ಎಂದು ಅತಿ ಪ್ರಬಲವಾಗಿ ತೋರಿತೋ ಅಂದು ಶರ್ಮಿಳೆ ಗಂಡನನ್ನು ಕರೆಯ ಕಳುಹಿಸಿ ದಳು. ಸಂಜೆಯ ವೇಳೆ. ಕೊಠಡಿಯಲ್ಲಿ ಮಂಕಾದ ಬೆಳಕು. ಹೊರಗೆ ಹೋಗು ವಂತೆ ನರ್ಸಿಗೆ ಸನ್ನೆ ಮಾಡಿದಳು. "ಜೀವಮಾನದಲ್ಲಿ ನಾನು ಭಗವಂತನ ಬಳಿ ಯಾವ ವರ ಪಡೆದಿದ್ದೆನೋ ಅದು ನೀವು. ಅದಕ್ಕೆ ಯೋಗ್ಯಳಾಗುವ ಶಕ್ತಿ ದೇವರು ನನಗೆ ಕೊಡಲಿಲ್ಲ. ಸಾಮರ್ಥ್ಯದಲ್ಲಿ ಎಷ್ಟಿತ್ತೋ ಅಷ್ಟು ಮಾಡಿರುವೆ. ತಪ್ಪುಗಳು ಹೇರಳವಾಗಿ ಆಗಿವೆ. ನನ್ನನ್ನು ಕ್ಷಮಿಸಿ."

ಶಶಾಂಕನು ಏನೋ ಹೇಳಲು ಯತ್ನಿಸುತ್ತಿದ್ದನು. ತಡೆದು ಹೇಳ ತೊಡಗಿದಳು. ''ಬೇಡ ಏನೂ ಹೇಳಬೇಡಿ. ಊರ್ಮಿಯನ್ನು ನಿಮ್ಮ ಕೈಯಲ್ಲಿಟ್ಟು ಹೋಗುತ್ತೇನೆ. ಅವಳು ನನ್ನ ಸ್ವಂತ ಸೋದರಿ ಅವಳಲ್ಲಿ ನನ್ನನ್ನೇ ಪಡೆಯುವಿರಿ. ಅಷ್ಟೇ ಅಲ್ಲ. ನನ್ನಲ್ಲಿ ಹೊಂದಲಾರದೆ ಹೋದ ಇನ್ನೂ ಹೆಚ್ಚು ಅಂಶವನ್ನೂ ಪಡೆಯುವಿರಿ. ಇಲ್ಲ ಸುಮ್ಮನಿರಿ. ಏನೂ ಹೇಳ ಬೇಡಿರಿ ಸಾಯುವ ಕಾಲದಲ್ಲೇ ನನ್ನ ಸೌಭಾಗ್ಯ ಪೂರ್ಣವಾಯಿತು. ನಿಮ್ಮನ್ನು ಸುಖಪಡಿಸಿದೆ."

"ಡಾಕ್ಟರು ಬಂದಿರುವರು" ಎಂದು ಹೊರಗಿನಿಂದ ನರ್ಸು ಕೂಗಿ ಹೇಳಿದಳು.

'ಕರೆದುಕೊಂಡು ಬಾ' ಎಂದಳು ಶರ್ಮಿಳೆ.

ಮಾತು ನಿಂತಿತು.

ಶರ್ಮಿಳೆಯ ಸೋದರಮಾವನಿಗೆ ಅಶಾಸ್ತ್ರೀಯ ಚಿಕಿತ್ಸೆಯನ್ನು ಪತ್ತೆ ಹಚ್ಚುವುದರಲ್ಲಿ ಬಹು ಉತ್ಸಾಹ. ಈಗೀಗ ಅವರಿಗೆ ಒಬ್ಬ ಸನ್ಯಾಸಿಯ ಸೇವೆಯಲ್ಲಿ ಉತ್ಸಾಹ. ಡಾಕ್ಟರುಗಳು ಇನ್ನೇನು ಮಾಡಲೂ ಸಾಧ್ಯವಿಲ್ಲ ವೆಂದು ಕೈಬಿಡಲು ಹಿಮಾಲಯದಿಂದ ಹಿಂದಿರುಗುವ ಬಾಬಾಜಿಯೊಬ್ಬರ ಔಷಧವನ್ನು ಪರೀಕ್ಷಿಸಬೇಕೆಂದು ಅವರು ಹಠ ಹಿಡಿದರು. ಟಿಬೆಟ್ಟಿನ ಯಾವುದೋ ಮೂಲಿಕೆಯ ಪುಡಿ ಮತ್ತು ಹೆಚ್ಚಾದ ಪ್ರಮಾಣದಲ್ಲಿ ಹಸುವಿನ ಹಾಲು ಇವಿಷ್ಟೇ ಈ ಔಷಧಿಯ ಉಪಕರಣಗಳು.

ಶಶಾಂಕನು ಯಾವ ವಿಧವಾದ ಅಳಲೆಕಾಯಿ ಪಂಡಿತರುಗಳ ಚಿಕಿತ್ಸೆ ಯನ್ನು ಸಹಿಸುವವನಲ್ಲ. ಅವನು ಅಡ್ಡ ಬಂದನು. 'ಬೇರೆ ಏನೂ ಪ್ರಯೋ ಜನ ಆಗದಿದ್ದರೂ ಮಾವನ ಮನಸ್ಸಿಗೆ ಸಮಾಧಾನವಾಗುವುದಲ್ಲವೇ?' ಎಂದು ಶರ್ಮಿಳೆ ಹೇಳಿದಳು.

ನೋಡ ನೋಡುತ್ತ ಪ್ರಯೋಜನವಾಯಿತು. ನಿಶ್ವಾಸದ ಕಷ್ಟ ಕಡಿಮೆ ಯಾಯಿತು. ಮೈಯಲ್ಲಿ ರಕ್ತ ಕೂಡಿ ಬರತೊಡಗಿತು.

ಏಳು ದಿನಗಳಾದುವು. ಹದಿನೈದು ದಿನಗಳು ಕಳೆದುವು. ಶರ್ಮಿಳೆ ಎದ್ದು ಕುಳಿತಳು. ಡಾಕ್ಟರುಗಳು "ಸಾವಿನ ಹೊಡೆತದಿಂದಲೇ ಅನೇಕ ವೇಳೆ ಶರೀರ Desperate ಆಗಿ ಕೊನೆಗಾಲದಲ್ಲಿ ತನ್ನನ್ನು ತಾನು ರಕ್ಷಿಸಿ ಕೊಳ್ಳುವುದುಂಟು" ಎಂದರು.

ಶರ್ಮಿಳೆ ಬದುಕಿ ಎದ್ದಳು.

ಆಗ ಅವಳು ಯೋಚಿಸತೊಡಗಿಡಳು. "ಇದೇನು ಆಪತ್ತು. ಏನು ಮಾಡಲಿ? ಕೊನೆಗಾಲದಲ್ಲಿ ಬದುಕಿ ಎದ್ದು ಹೆಣದ ಸಮಾನವಾಗಿ ಬದುಕ ಲೇನು?" ಅತ್ತ ಊರ್ಮಿ ಸಾಮಾನು ಸರಂಜಾಮುಗಳನ್ನು ಜೋಡಿಸ ತೊಡಗಿದಳು. ಇಲ್ಲಿ ಅವಳ ಸರದಿ ಮುಗಿಯಿತು.

"ಹಿಂದೂ ಸಮಾಜದಲ್ಲಿ ತಂಗಿ ಸವತಿಯಾಗಿ ಯಾವಾಗಲೂ ಯಾವ ಮನೆಯಲ್ಲೂ ಇಲ್ಲವೇನು?"

"ಛೀ"

"ಲೋಕನಿಂದೆಯೇ ! ವಿಧಿಯ ವಿಧಾನಕ್ಕಿಂತ ಜನಗಳ ಬಾಯ ಮಾತು ದೊಡ್ಡದಾಗುವುದೇನು?"

ಶಶಾಂಕನನ್ನು ಕರೆದು ಹೇಳಿದಳು.– "ನಡೆಯಿರಿ. ನಾವುಗಳು ನೇಪಾಳಕ್ಕೆ ಹೋಗೋಣ. ಅಲ್ಲಿಯ ಸರ್ಕಾರದಲ್ಲಿ ನಿಮಗೆ ಕೆಲಸ ಸಿಕ್ಕುವ ಮಾತು ನಡೆದಿತ್ತು. ಯತ್ನಿಸಿದರೆ ಸಿಕ್ಕುವುದು. ಆ ದೇಶದಲ್ಲಿ ಯಾವ ಮಾತೂ ತಲೆಯೆತ್ತದು."

ಶರ್ಮಿಳೆ ಯಾರಿಗೂ ಯೋಚಿಸಲು ಅವಕಾಶವನ್ನೇ ಕೊಡಲಿಲ್ಲ. ಹೊರಡಲು ಸಿದ್ಧತೆ ಆಗುತ್ತಿದೆ. ಊರ್ಮಿ ಆಗಲೂ ಸಂದೇಹದೊಡನೆ ಮೂಲೆಯಲ್ಲಿ ಅಡಗಿ ತಿರುಗುವಳು.

ಶಶಾಂಕನು ಅವಳೊಡನೆ 'ಇಂದು ನೀನು ಬಿಟ್ಟು ಹೋಗುವೆಯಾದರೆ ನನ್ನ ಗತಿ ಏನಾಗುವುದು ಸ್ವಲ್ಪ ಆಲೋಚಿಸಿ ನೋಡು' ಎಂದನು.

ಊರ್ಮಿಯು "ನಾನೇನೂ ಯೋಚಿಸಲಾರೆ. ನೀವಿಬ್ಬರೂ ಏನು ತೀರ್ಮಾನ ಮಾಡುವಿರೋ ಹಾಗೆ ನಡೆಯುವೆನು" ಎಂದಳು.

ಸಿದ್ಧಪಡಿಸಿಕೊಳ್ಳುವುದರಲ್ಲಿ ಕೆಲವು ದಿನಗಳು ಕಳೆದವು. ಅನಂತರ ಸಮಯ ಹತ್ತಿರವಾದಾಗ ಊರ್ಮಿಯು "ಇನ್ನು ಆರೇಳು ದಿನಗಳು ತಡೆಯಿರಿ. ತಾತಯ್ಯನ ಹತ್ತಿರ ಲೆಕ್ಕಾಚಾರದ ವಿಷಯ ಮಾತನಾಡಿ ಸರಿಪಡಿಸಿಕೊಂಡು ಬರುವೆನು" ಎಂದಳು.

ಊರ್ಮಿ ಹೊರಟು ಹೋದಳು.

ಈ ವೇಳೆಯಲ್ಲಿ ಮಥುರನು ಮುಖ ಗಂಟು ಹಾಕಿಕೊಂಡು ಶರ್ಮಿಳೆಯ ಹತ್ತಿರ ಬಂದನು. "ನೀವುಗಳು ಸಕಾಲದಲ್ಲೇ ಹೊರಟಿರುವಿರಿ. ನಿನ್ನ ಸಂಗಡ ಮಾತುಕತೆ ತೀರ್ಮಾನವಾದ ನಂತರವೇ ನಾನು ಶಶಾಂಕನೊಡನೆ ವಿಭಾಗ ಮಾಡಿಕೊಂಡಿದ್ದೆನು. ಅವನ ಲಾಭ ನಷ್ಟದ ಹೊಣೆ ನನ್ನೊಡನೆ ಗಂಟು ಹಾಕಿಕೊಂಡಿರಲಿಲ್ಲ. ಈಗ ಕೆಲಸ ನಿಲ್ಲಿಸುವ ಉದ್ದೇಶದಿಂದ ಶಶಾಂಕ ಕೆಲವು ದಿನಗಳಿಂದ ಲೆಕ್ಕ ನೋಡುತ್ತಿದ್ದನು. ನಿನ್ನ ಹಣವೆಲ್ಲಾ ಮುಳುಗಿ ಹೋಗಿದೆಯೆಂದು ತಿಳಿಯಿತು. ಅಷ್ಟಾಗಿಯೂ ಇನ್ನೂ ಸಾಲವಾಗಿದಿಯಲ್ಲಾ ಅದನ್ನು ತೀರಿಸಲು ಮನೆ ಮಾರಬೇಕಾಗುವಂತೆ ತೋರುತ್ತೆ" ಎಂದನು.

'ಸರ್ವನಾಶ ಇಷ್ಟು ದೂರ ಮುಂದುವರಿಯಿತೆ. ಅವರಿಗೆ ತಿಳಿಯಲೇ ಇಲ್ಲವೆ?' ಎಂದು ಶರ್ಮಿಳೆ ಕೇಳಿದಳು.

"ಸರ್ವ ನಾಶ ಅನೇಕ ವೇಳೆ ಹದ್ದು ಎರಗುವಂತೆ, ಯಾವ ಕ್ಷಣದಲ್ಲಿ ಎರಗುವುದೋ ಅದರ ಹಿಂದಿನ ಘಳಿಗೆಯ ವರೆಗೆ ತಿಳಿವಳಿಕೆ ಕೊಡದು.

ಅವನು ತನ್ನದು ನಷ್ಟವಾಗುತ್ತಿದೆಯೆಂದು ಎಣಿಸಿಕೊಂಡಿದ್ದನು. ಆಗಲೂ ಸ್ವಲ್ಪದರಲ್ಲಿ ಸುಧಾರಿಸಬಹುದಾಗಿತ್ತು ಆದರೆ ದುರ್ಬುದ್ಧಿ ಒದಗಿತು. ವ್ಯಾಪಾರದ ನಷ್ಟವನ್ನು ಅತಿ ಬೇಗನೆ ತುಂಬಿಕೊಳ್ಳುವೆನೆಂದು ಎಣಿಸಿ ನನಗೆ ಮರೆ ಮಾಚಿ ಕಲ್ಲಿದ್ದಲಿನ ಮಾರ್ಕೆಟ್ಟಿನಲ್ಲಿ ತೇಜಿ ಮಂದಿಯ ಆಟವನ್ನು ಆರಂಭಿಸಿದನು. ತೇಜಿಯ ಧಾರಣೆಯಲ್ಲಿ ಕೊಂಡಿದ್ದುದನ್ನು ಮಂದಿಯ ಧಾರಣೆಯಲ್ಲಿ ಮಾರಬೇಕಾಯಿತು. ಅಕಸ್ಮಾತ್ತಾಗಿ ಇಂದು ನೋಡಿದಾಗ ಅವನದೆಲ್ಲ ಗಾಳಿಯಲ್ಲಿ ಹಾರಿಹೋಗಿದೆಯೆಂದೂ ಬೂದಿ ಮಾತ್ರ ಉಳಿದಿದೆಯೆಂದೂ ಅರಿವಾಯಿತು. ಈಗ ದೇವರ ದಯದಿಂದ ನೇಪಾಳದಲ್ಲಿ ಕೆಲಸ ಸಿಕ್ಕಿದರೆ ನೀವುಗಳು ಯೋಚನೆ ಮಾಡಬೇಕಾಗಿರದು".

ಶರ್ಮಿಳೆ ಬಡತನಕ್ಕೆ ಅಂಜುವವಳಲ್ಲ. ಮೇಲಾಗಿ ಅಭಾವದ ದಿನಗಳಲ್ಲಿ ಗಂಡನ ಸಂಸಾರದಲ್ಲಿ ತನ್ನ ಸ್ಥಾನ ಇನ್ನೂ ಮೇಲೇರುವುದೆಂದು ಅವಳು ಬಲ್ಲಳು. ದಾರಿದ್ರ್ಯದ ಕಠೋರತೆಯನ್ನು ಮೃದುಮಾಡಿ ದಿನಗಳನ್ನು ಕಳೆಯಲು ತನ್ನಿಂದ ಆಗುವುದೆಂದು ಅವಳಿಗೆ ನಂಬಿಕೆಯಿದೆ. ಮುಖ್ಯವಾಗಿ ಕೈಯಲ್ಲಿ ಒಡವೆಗಳಿದ್ದು ಅವುಗಳ ಸಹಾಯದಿಂದ ಈಗಲೂ ಕೆಲವು ಕಾಲ ಹೆಚ್ಚು ಕಷ್ಟವಿಲ್ಲದಂತೆ ಇರಲು ಸಾಧ್ಯ. ಊರ್ಮಿಯೊಡನೆ ಮದುವೆಯಾದರೆ ಅವಳ ಆಸ್ತಿಯೂ ಗಂಡನಿಗೆ ಸೇರಬಹುದೆಂಬ ಸಂಗತಿಯೂ ಸಂಕೋಚದೊಡನೆ ಅವಳ ಮನಸ್ಸಿನಲ್ಲಿ ತಲೆಹಾಕುತ್ತಿತ್ತು. ಆದರೆ ಜೀವನ ನಿರ್ವಾಹವಷ್ಟರಿಂದಲೇ ಸಾರ್ಥಕವಾಗುವುದಲ್ಲ. ಇಷ್ಟು ದಿನಗಳಿಂದ ಸ್ವಸಾಮರ್ಥ್ಯದಿಂದ ತನ್ನ ಕೈಯಿಂದಲೇ ಗಂಡನು ಯಾವ ಸಂಪತ್ತನ್ನು ನಿರ್ಮಿಸಿದ್ದನೋ, ಯಾವುದನ್ನು ಉದ್ದೇಶಿಸಿ ಶರ್ಮಿಳೆ ತನ್ನ ಮನದ ಆಶೆಗಳನ್ನು ಅಡಗಿಸಿಟ್ಟಿದ್ದಳೋ, ಅವರಿಬ್ಬರ ಜೀವಮಾನದ ಒಂದಾದ ಬಾಳುವೆಯ ಆಶೆ ಇಂದು ಬಿಸಿಲ್ಗುದುರೆಯಂತೆ ಕಣ್ಮರೆಯಾಯಿತಲ್ಲ! ಈ ಅಗೌರವವೇ ಅವಳನ್ನು ಮಣ್ಣಿನ ಪಾಲು ಮಾಡಿತ್ತು. "ನನ್ನ ಹಣೆಯಲ್ಲಿ ಏನು ಬರೆದಿತ್ತೋ ಅದೇನೋ ಆಯಿತು. ಆದರೆ ಬಡತನ-ಅವಮಾನದ ಈ ನಿದಾರುಣ ಶೂನ್ಯತೆ ಒಂದು ದಿನ ಅವರ ಮನದಲ್ಲಿ ಪರಿತಾಪವನ್ನು ಉಂಟು ಮಾಡದೇನು? ಯಾರ ಮೋಹದಲ್ಲಿ ಮುಳುಗಿದ್ದರಿಂದ ಇದು ಘಟಿಸಲು ಸಾಧ್ಯವಾಯಿತೋ ಪ್ರಾಯಶಃ ಒಂದು ದಿನ ಅವಳನ್ನು ಕ್ಷಮಿಸಲಾರದವರಾದರು. ಅವಳು ಬಡಿಸಿದ ಅನ್ನ ಅವರ ಬಾಯಲ್ಲಿ ವಿಷವಾಗಿ ತೋರುವುದು. ತನ್ನ ತಲೆತಿರುಕತನದ ಫಲ ನೋಡಿ ನಾಚುವರು. ಆದರೆ ಮದಿರೆಯ ಮೇಲೆ ತಪ್ಪು ಹೊರಿಸುವರು.

ಒಂದು ವೇಳೆ ಕೊನೆಗೆ ಊರ್ಮಿಯ ಆಸ್ತಿಯ ಮೇಲೆ ಅವಲಂಬಿಸಬೇಕಾದ ಸಂದರ್ಭವೇನಾದರೂ ಒದಗಿದರೆ ಅದೇ ಅವಮಾನದ ಕೋಪದಿಂದ ಊರ್ಮಿಯನ್ನು ಘಳಿಗೆ ಘಳಿಗೆಗೆ ವ್ಯಯುರಿಸಿ ಸಾಯಿಸುವರು.

ಇತ್ತ ಮಥುರನೊಡನೆ ಲೆಕ್ಕಪತ್ರಗಳನ್ನು ನೋಡಲು ಹೋಗಿ ಶರ್ಮಿಳೆಯ ಹಣವೆಲ್ಲಾ ತನ್ನ ವ್ಯಾಪಾರದಿಂದ ಮುಳುಗಿ ಹೋದ ಸಂಗತಿ ಹಠಾತ್ತಾಗಿ ಶಶಾಂಕನಿಗೆ ತಿಳಿಯಿತು ಈ ಸಂಗತಿ ಇದುವರೆಗೆ ಶರ್ಮಿಳೆ ಅವನಿಗೆ ತಿಳಿಸಿರಲಿಲ್ಲ. ಮಥುರನ ಸಂಗಡ ಕರಾರು ಮಾಡಿಕೊಂಡಿದ್ದಳು.

ಶಶಾಂಕನಿಗೆ ನೆನಪಾಯಿತು ಚಾಕರಿ ಬಿಟ್ಟಾಗ ಅವನು ಶರ್ಮಿಳೆಯ ಹಣವನ್ನು ಸಾಲ ತೆಗೆದುಕೊಂಡೇ ತನ್ನ ವ್ಯಾಪಾರವನ್ನು ಆರಂಭಿಸಿ ಬೆಳೆಸಿದ್ದನು. ಇಂದು ಮುಳುಗಿ ಹೋದ ವ್ಯಾಪಾರದ ಕೊನೆಯಲ್ಲಿ ಶರ್ಮಿಳೆಯ ಸಾಲವನ್ನು ತಲೆಯಲ್ಲಿ ಹೊತ್ತೇ ಅವನು ಚಾಕರಿಗೆ ಸೇರುತ್ತಿರುವನು ಈ ಸಾಲವನ್ನಂತೂ ಇನ್ನು ತೀರಿಸುವುದು ಸಾಧ್ಯವಿಲ್ಲ. ಚಾಕರಿಯ ಸಂಬಳದಿಂದ ತೀರಿಸುವ ದಾರಿ ಎಲ್ಲಿ?

ನೇಪಾಳದ ಪ್ರಯಾಣಕ್ಕೆ ಹತ್ತು ಹನ್ನೆರಡು ದಿನಗಳಿವೆ. ರಾತ್ರಿಯೆಲ್ಲಾ ನಿದ್ರೆ ಹತ್ತಲಿಲ್ಲ. ಬೆಳಗಿನ ಝಾವದಲ್ಲಿ ಶಶಾಂಕನು ದಡಬಡನೆ ಎದ್ದವನೇ ಗಾಜು ಹಾಕಿದ ಮೇಜಿನ ಮೇಲೆ ಬಲವಾಗಿ ಮುಷ್ಟಿಯಿಂದ ಗುದ್ದಿ 'ನೇಪಾಳಕ್ಕೆ ಹೋಗೆನು' ಎಂದನು. 'ನಾವಿಬ್ಬರೂ ಊರ್ಮಿಯೊಡನೆ ಕಲಕತ್ತೆಯಲ್ಲೇ ಇರೋಣ. ಹುಬ್ಬುಗಂಟಿಕ್ಕುವ ಸಮಾಜದ ಕ್ರೂರದೃಷ್ಟಿಯ ಇದಿರಿನಲ್ಲೇ ಇರೋಣ. ಪುನಃ ಇಲ್ಲಿಯೇ ಮುರಿದ ವ್ಯಾಪಾರವನ್ನು ಈ .ಕಲಕತ್ತೆಯಲ್ಲಿ ಮತ್ತೊಮ್ಮೆ ಎತ್ತಿ ನಿಲ್ಲಿಸೋಣ' ಎಂದು ಪ್ರತಿಜ್ಞೆ ಮಾಡಿದನು

ಯಾವ್ಯಾವ ಸಾಮಾನುಗಳು ಜೊತೆಯಲ್ಲಿ ಕೊಂಡು ಹೋಗಬೇಕು, ಯಾವುವನ್ನು ಇಟ್ಟು ಹೋಗಬೇಕು, ಎಂಬುದನ್ನು ಒಂದು ಪುಸ್ತಕದಲ್ಲಿ ಪಟ್ಟಿ ಮಾಡುತ್ತ ಶರ್ಮಿಳೆ ಕುಳಿತಿದ್ದಳು. 'ಶರ್ಮಿಳೇ ಶರ್ಮಿಳೇ' ಎಂಬ ಕೂಗನ್ನು ಕೇಳಿದಳು. ಅವಸರದಿಂದ ಪುಸ್ತಕವನ್ನು ಕೆಳಗೆ ಎಸೆದು ಗಂಡನ ಕೊಠಡಿಗೆ ಹೋದಳು. ಆಕಸ್ಮಾತ ಕೇಡಿನ ಶಂಕೆಯಿಂದ ಕಂಪಿತ ಹೃದಯದೊಡನೆ 'ಏನಾಗಿದೆ?' ಎಂದು ಮೆಲ್ಲಗೆ ಕೇಳಿದಳು.

'ನೇಪಾಳಕ್ಕೆ ಹೋಗೆನು. ಸಮಾಜವನ್ನು ಲೆಕ್ಕಿಸೆನು. ಇಲ್ಲಿಯೇ ಇರುವೆನು' ಎಂದನು.

"ಯಾಕೆ–ಏನಾಯಿತು?" ಎಂದಳು ಶರ್ಮಿಳೆ.

'ಕೆಲಸವಿದೆ' ಎಂದನು ಶಶಾಂಕ.

ಅದೇ ಹಿಂದಿನ ಹಳೆಯ ಮಾತು. ಕೆಲಸವಿದೆ. ಶರ್ಮಿಳೆಯ ಎದೆ ಡಬ ಡಬ ಹೊಡೆದುಕೊಳ್ಳತೊಡಗಿತು "ಶರ್ಮಿ, ನಾನು ಹೇಡಿಯೆಂದು ಎಣಿಸಬೇಡ. ಜವಾಬ್ದಾರಿಯನ್ನು ಬಿಸುಟು ಓಡಲೇ ನಾನು? ಇಂತಹ ಅಧಃ ಪತನವನ್ನು ಯೋಚಿಸುವುದೂ ಸಾಧ್ಯವೇ" ಎಂದನು.

ಶರ್ಮಿಳೆ ಹತ್ತಿರ ಹೋಗಿ ಅವನ ಕೈಹಿಡಿದುಕೊಂಡು "ಏನಾಗಿದೆ ? ನನಗೆ ಸ್ವಲ್ಪ ವಿವರವಾಗಿ ತಿಳಿಸಿ" ಎಂದಳು.

ಶಶಾಂಕನು "ಪುನಃ ನಿನ್ನ ಹತ್ತಿರ ಸಾಲ ಮಾಡಿರುವೆ. ಆ ಸಂಗತಿ ಯನ್ನು ಮರೆಮಾಚಬೇಡ" ಎಂದನು.

ಶರ್ಮಿಳೆ 'ಸರಿ-ಒಳ್ಳೆಯದೇ' ಎಂದಳು.

"ಅಂದಿನ ಹಾಗೆಯೇ ಇಂದಿನಿಂದ ಮತ್ತೆ ಸಾಲ ತೀರಿಸಲು ನಿಂತೆನು. ನೆನಪಿಡು. ಯಾವುದನ್ನು ಮುಳುಗಿಸಿರುವೆನೋ ಅದನ್ನು ಇನ್ನು ಮೇಲಕ್ಕೆ ಎತ್ತಿ ನಿಲ್ಲಿಸುವುದೇ ಖಂಡಿತ ಹಿಂದೊಮ್ಮೆ ನೀನು ನನ್ನನ್ನು ನಂಬಿದ್ದೆ. ಹಾಗೆಯೇ ಪುನಃ ನಂಬಿಕೆಯಿಡು" ಎಂದನು ಶಶಾಂಕ.

ಶರ್ಮಿಳೆ ಗಂಡನ ಎದೆಯ ಮೇಲೆ ತಲೆಯಿಟ್ಟುಕೊಂಡು 'ನೀವೂ ನನ್ನಲ್ಲಿ ನಂಬಿಕೆಯಿಡಿ. ನನಗೆ ಕೆಲಸ ಕಲಿಸಿ ಕೊಡಿ. ನನ್ನನ್ನು ತಯಾರು ಮಾಡಿ ಕೊಳ್ಳಿ. ನಿಮ್ಮ ಕೆಲಸಕ್ಕೆ ಯೋಗ್ಯಳಾಗಿ ಆಗುವಂತೆ ಇಂದಿನಿಂದಲೆ ನನಗೆ ಪಾಠ ಕಲಿಸಿ' ಎಂದಳು.

ಹೊರಗಡೆ "ಟಪಾಲ್" ಎಂಬ ಶಬ್ದ ಕೇಳಿಸಿತು.

ಊರ್ಮಿಯ ಕೈಬರಹದ ಎರಡು ಕಾಗದಗಳು. ಒಂದು ಶಶಾಂಕನ ಹೆಸರಿಗೆ:—

"ನಾನು ಈಗ ಬೊಂಬಾಯಿಗೆ ಹೊರಟಿರುವೆ. ವಿಲಾಯತಿಗೆ ಹೋಗುವೆ. ಅಪ್ಪನ ಆದೇಶದಂತೆ ಡಾಕ್ಟರೀ ಕಲಿತು ಬರುವೆನು. ಆರೇಳು ವರ್ಷಗಳು ಕಳೆಯುವುವು. ನಿನ್ನ ಸಂಸಾರದಲ್ಲಿ ಕಾಲಿಟ್ಟು ಒಡೆದು ಹಾಳು ಮಾಡಿರುವೆ ನಲ್ಲಾ ಈ ನಡುವೆ ಕಾಲದ ವಶದಲ್ಲಿ ತಾನಾಗಿ ಸರಿಯಾಗುವುದು. ನನಗಾಗಿ ಯೋಚಿಸಬೇಡ. ನಿನಗಾಗಿಯೇ ಮನಸ್ಸಿನಲ್ಲಿ ಯೋಚನೆಯಾಗುತ್ತಿದೆ."

ಶರ್ಮಿಳೆಯ ಕಾಗದದಲ್ಲಿ:–

"ಅಕ್ಕ, ನಿನ್ನ ಪಾದಗಳಲ್ಲಿ ಶತಸಹಸ್ರಪ್ರಣಾಮಗಳು. ಅಜ್ಞಾನದಿಂದ ಅಪರಾಧ ಮಾಡಿದೆನು. ಕ್ಷಮಿಸು. ನಾನು ಮಾಡಿದ್ದು ಒಂದು ವೇಳೆ ಅಪರಾಧವಲ್ಲವೆಂದರೆ ಅದನ್ನು ಅರಿತೇ ಸುಖಿಯಾಗುವೆ. ಅದಕ್ಕಿಂತ ಹೆಚ್ಚು ಸುಖಿಯಾಗುವ ಆಶೆ ಮನಸ್ಸಿನಲ್ಲಿ ಇಡೆನು. ಯಾವುದಕ್ಕೆ ಸುಖವೆಂದು ಹೇಳುವುದೋ ಅದನ್ನು ಖಂಡಿತವಾಗಿ ಮನಸ್ಸಿನಲ್ಲಿ ಅರಿಯೆನು. ಒಂದು ವೇಳೆ ಸುಖವುಂಟಾಗದಿದ್ದರೂ ಸರಿಯೆ. ತಪ್ಪು ಮಾಡಲು ಅಂಜುವೆನು "



## ದಯವಿಟ್ಟು ತಿದ್ದಿಕೊಳ್ಳಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೬ | ೧೬ | ತಲೆಗೆ ಸುತ್ತಿಕೊಂಡಿರುವ ಉಪಾಚರರ | ತಲೆಗೆ ಮಫ್ಲರ್ ಸುತ್ತಿಕೊಂಡಿರುವ ಉಪಶಿಕ್ಷಕರ |
| ೩೨ | ೨೬ | ಕೌಟುಂಬಿ ಹೈರಾಜ್ಯದಲ್ಲಿ | ಕೌಟುಂಬಿಕ ದ್ವೈರಾಜ್ಯದಲ್ಲಿ |
| ೩೯ | ೨೩ | ನೀಲಿ ಸ್ಫಂಕದ | ನೀಲಿ ಸ್ಫಟಿಕದ |
| ೮೩ | ೧೩ | ತೀವಡಿ | ಲೇವಡಿ |
| ೮೩ | ೧೪ | ತೀವಡಿಯಿಂದ | ಲೇವಡಿಯಿಂದ |
| ೮೬ | ಟಿಪ್ಪಣಿಯ ೪ನೆಸಾಲು | ಕಳೇಬರವನ್ನು ಕಟ್ಟಿಸಿದ | ಕಳೇಬರವನ್ನು ರಚಿಸಿಡಲು ಕಟ್ಟಿಸಿದ |
| ೮೬ | ೪ | ಶಂಕೆಯೇನಾದರೂ ಹಾಕರ್‌ನನ್ನು | ಶಂಕೆಯೇನಾದರೂ ಇದ್ದರೆ ಹಾಕರ್‌ನನ್ನು |